# ಹೊಸ ದಿಕ್ಕು





ಜಿ. ಸಾಹಿತ್ಯಿಕ-ಸಾಂಸ್ಕೃತಿಕ ತ್ರೈಮಾಸಿಕ ಪತ್ರಿಕೆ

ಈ ಸಂಚಿಕೆಯಲ್ಲಿ

* ಖಾಸಗಿ ಪ್ರಸಾರಕ್ಕಾಗಿ ಮಾತ್ರ

# "ಹೊಸ ದಿಕ್ಕು" ಸಾಹಿತ್ಯಿಕ-ಸಾಂಸ್ಕೃತಿಕ ದ್ವೈಮಾಸಿಕ

ಸಂಪುಟ ೧ ಸಂಚಿಕೆ ೫ ಜನವರಿ–ಫೆಬ್ರುವರಿ ೧

ಸಂಪಾದಕ : ತಿಮ್ಮಯ್ಯ ಪುರ್ಲೆ

ಸಲಹೆ : ಚಂದ್ರಕಾಂತ ಕರದಳ್ಳಿ, ಎಸ್. ಬಿ. ಹೊಸ್ಮನಿ, ಸೂಗಯ್ಯ ಹಿರೇಮಠ

ನೀವು ಕಳಿಸುವ ಚಂದಾ "ಹೊಸ ದಿಕ್ಕು" ಬೆಳವಣಿಗೆಯ ಸಂಕೇತ

ವಾರ್ಷಿಕ ಚಂದಾ : ರೂ. ೫೦–೦೦ ○ ಆಜೀವ ಚಂದಾ : ರೂ. ೫೦೦–೦೦

ಹೈದರಾಬಾದ ಕರ್ನಾಟಕ ಹಾಗೂ ಸುತ್ತಲಿನ ಬಿಜಾಪೂರ, ಬಳ್ಳಾರಿ ಜಿಲ್ಲೆಗಳ ಲೇಖಕರಿಗೆ ಹೆಚ್ಚಿನ ಪ್ರಾತಿನಿಧ್ಯ ನೀಡುವ ಮೂಲಕ ಕನ್ನಡ ನಾಡಿನಾದ್ಯಂತ ತಲು-ಪಲು ಇಚ್ಛಿಸುವ 'ಹೊಸ ದಿಕ್ಕು' ಗೆ ದಯವಿಟ್ಟು ನೀವು ಚಂದಾದಾರರಾಗಿ. ನಿಮ್ಮ ಸ್ನೇಹಿತರನ್ನು, ಆಸಕ್ತರನ್ನು ಚಂದಾದಾರರಾಗಿಸಿರಿ. ಲೇಖನ, ಕವನ, ಕಥೆ ಇತ್ಯಾದಿ ಕಳಿಸುವವರು ಸ್ವೀಕೃತಿ ಬಗ್ಗೆ ತಿಳಿಯಲು ಸ್ವವಿಳಾಸದ ಕಾರ್ಡ್ ಇಡಿ. ಅಂದವಾಗಿ ಬರೆದು ಅಥವಾ ಸುಂದರವಾಗಿ ಟೈಪು ಮಾಡಿಸಿ ಕಳಿಸಿರಿ. ಸದಸ್ಯರಾಗಿ ಪತ್ರಿಕೆಗೆ ಬರಹ ಕಳಿಸಿರಿ.

—●—

ಸಂಪಾದಕರು :

**ಹೊಸದಿಕ್ಕು,**
ಗೀತಾಂಜಲಿ ಬಿಲ್ಡಿಂಗ
(ದಿಗ್ಗಿ ಬಿಲ್ಡಿಂಗ ಹತ್ತಿರ),
ಶಹಾಪೂರ–೫೮೫ ೨೨೩, ಕರ್ನಾಟಕ.

ಚಂದಾ ಕಳಿಸುವ ವಿಳಾಸ :

**ಚಂದ್ರಕಾಂತ ಕರದಳ್ಳಿ,**
ಶಹಾಪೂರ ಪೇಟೆ,
ಶಹಾಪೂರ-೫೮೫ ೨೨೩,
ಕಲಬುರ್ಗಿ ಜಿಲ್ಲೆ, ಕರ್ನಾಟಕ.

ಸುಂದರ ಹಾಗೂ ತ್ವರಿತ ಮುದ್ರಣಕ್ಕಾಗಿ ಸದಾ ಸಂದರ್ಶಿಸಿರಿ :

**ಪುರ್ಲೆ ಪ್ರಿಂಟರ್ಸ್**

**ಕಲಬುರ್ಗಿ ರಸ್ತೆ, ಬಸ ಸ್ಟ್ಯಾಂಡ ಹತ್ತಿರ,**
ಶಹಾಪೂರ, ಕಲಬುರ್ಗಿ ಜಿಲ್ಲೆ.

# ಪತ್ರಿಕೆಯ ಅಂತರಂಗದಿಂದ ನಿಮ್ಮ ಅಂತರಂಗಕ್ಕೆ

ಅಂಕಣಕ್ಕಾಗಿ. ಬರೆಯಲು ಕುಳಿತಿರುವ ಈ ಸಂದರ್ಭದಲ್ಲಿ ಮನಸ್ಸಿನ ತುಂಬ ಅವ್ಯಕ್ತವಾದ ನೋವು ಭಯ, ಹತಾಶೆ ದುಗುಡ ತುಂಬಿಕೊಂಡಿದೆ. ಇಲ್ಲಿ, ಈ ನೆಲದಲ್ಲಿ ಏನಾಗುತ್ತಿದೆ ಎಂದು ಯೋಚಿಸುತ್ತಾ ಇಂದು ಹಿಂದು ಧರ್ಮವು ಸಂಪ್ರದಾಯಿಕ ಕಂದಾಚಾರಿಗಳ ಸ್ತಂಭವಾದಂತೆ ಭಾಸವಾಗುತ್ತಿದೆ. ಕಾನೂನು ಮತ್ತು ಶಾಸನಗಳ ಮೂಲಕ ಸರ್ಕಾರವು ಕೂಡ ಹಿಂದುಧರ್ಮವನ್ನು ಆಧುನಿಕ ಗೊಳಿಸಬೇಕೆಂಬ ಸಂದರ್ಭದಲ್ಲಿ ಮತೀಯ ರಾಷ್ಟ್ರ ಮಾಡಬೇಕೆಂದು ಘೋಷಣೆ ಕೂಗುತ್ತಿರುವ ವಿಶ್ವ ಹಿಂದೂ ಪರಿಷತ್, ಆರ್.ಎಸ್.ಎಸ್. ಹಿಂದೂ ಮಹಾ ಸಭಾದಂತಾ ಮತೀಯ ಸಂಘಟನೆಗಳು ಎಲ್ಲ ಮಠಾಧೀಶರನ್ನು; ಪ್ರಚಾರ ಮಧ್ಯಮಗಳನ್ನು ಬಳಸಿ-ಕೊಳ್ಳುತ್ತಿವೆ. ಇಂಥ ಸಂದರ್ಭದಲ್ಲಿ ಪ್ರಗತಿಪರ ವಿಚಾರ ಮಾಡುವ ಯಾವುದೇ ವ್ಯಕ್ತಿ ಕೈ ಕಟ್ಟಿ ಕುಳಿತು ಕೊಳ್ಳುವ ಸಮಯ ಇದಲ್ಲ.

ಕೋಮುವಾದಿಗಳ ಕೈ ಮೇಲಾಗಿದೆ ಎಂದು ನಾವು ಹತಾಶ ಭಾವನೆಯಿಂದ ಇರುವುದಕ್ಕಿಂತ; ಡಾ॥ ಅಂಬೇಡ್ಕರರಂಥವರ ವಿಚಾರವನ್ನು ಅವಲೋಕಿಸ-ಬೇಕಾಗಿದೆ.

"ಭಾರತದಲ್ಲಿ ಇರುವ ಎಲ್ಲ ಸಮಸ್ಯೆಗಳನ್ನು ಧೈರ್ಯದಿಂದ ಎದುರಿಸಬೇಕು. ಸತ್ತು ಬಿದ್ದ ನಾಯಿ ಹೊಲಸು ನಾರುವಂತೆ ಈ ಸಮಸ್ಯೆಗಳನ್ನು ಅಥವಾ ಬಿಕ್ಕಟನ್ನು ನಾರಲು ಬಿಡುವಷ್ಟು ಜಡವಾಗಿ ಅಧೈರ್ಯಗೊಳ್ಳಬಾರದು. ಮತ್ತು ತಾನು ಈ ದೇಶದಲ್ಲಿ ನಡೆಯುತ್ತಿರುವ ನ್ಯಾಯ ಜಗಳದ ನಿಸ್ಸಹಾಯಕ ಸಾಕ್ಷಿಯಾಗಿರದೆ ಇನ್ನೇನೂ ಮಾಡಲು ಸಾಧ್ಯವಿಲ್ಲ ಎಂಬ ಹತಾಶ ಭಾವನೆ ತಾಳಬಾರದು. ಹಿಂದಿನ ವೈಫಲ್ಯಗಳು ಯಾರನ್ನು ಎದೆಗುಂದಿಸಬೇಕಾಗಿಲ್ಲ.ಏಕೆಂದರೆ ಕೋಮುವಾದ ಪ್ರಶ್ನೆಯ ವಿಷಯದಲ್ಲಿ ಒಪ್ಪಂದಕ್ಕೆ ಬರುವ ಎಲ್ಲಾ ಪ್ರಯತ್ನಗಳು ವಿಫಲವಾಗಿದ್ದರೂ ಈ ವೈಫಲ್ಯಗಳ ಕಾರಣ ಭಾರತೀಯರಲ್ಲಿ ಯಾವುದೇ ದೋಷವಿದೆಯೆಂದಲ್ಲ. ಅದು ಮುಖ್ಯವಾಗಿ ಅವರು ಅನುಸರಿಸುತ್ತಿರುವ ಮಾರ್ಗದಲ್ಲಿರುವ ದೋಷದಿಂದಾಗಿದೆ." ಈ ವಿಚಾರಗಳು ನಮ್ಮನ್ನು ಧೈರ್ಯದಿಂದ ಮುನ್ನುಗ್ಗಿಸುವ ಮೂಲಕ ಸುತ್ತಲ ಸ್ಥಿತಿ-ಯನ್ನು ಯೋಚನೆಗೆ ಹಚ್ಚುತ್ತಿದೆ.

ಕಲಿಕೇರಿ ಮುಗ್ಧೆಯ ಅತ್ಯಾಚಾರದ ಘಟನೆ ಮನಸ್ಸಿನಿಂದ ಮಾಸುವಮುಂಚೆ ಕುಷ್ಟಗಿ ಪ್ರಕರಣ, ಬೆಂಡಿಗೇರಿಯ ಪ್ರಕರಣದ ಬೆನ್ನ ಹಿಂದೆಯೇ ಈಗ ಬದನವಾಳದ ದಲಿತರ ದುರಂತ, ಈ ಎಲ್ಲವುಗಳ ಮಧ್ಯೆಯು ವೀರಪ್ಪನ ರಾಕ್ಷಸಿ ರಕ್ತದಾಹಕ್ಕೆ ಬಲಿಯಾದ ಪೋಲೀಸರು. ಈ ಎಲ್ಲ ಸಾವು-ದುರಂತಗಳಿಗೆ ಒಳಗಾದವರ ಅವಲಂಬಿತರ ನೋವು ನಮ್ಮದಾಗುವದು ಸಾಧ್ಯವಿದೆಯೇ?

ಈ ಸಾವು ನೋವಿನ ಸಂದರ್ಭದಲ್ಲಿ ಪತ್ರಿಕೆಯು ಗೆಳೆಯರಾದ ಬಾಪುಗೌಡ ಶಾಡಲಗೇರಿ, ವಂದನಾ ದೇಸಾಯಿ ದಂಪತಿಗಳು ಆಕಸ್ಮಿಕ ಬೆಂಕಿ ಪ್ರಕರಣದಲ್ಲಿ ಇಲ್ಲ-ವಾಗಿ ಬದುಕಿನ ಕ್ಷಣಿಕತೆಯನ್ನು ಆಲೋಚನೆಗೆ ಹಚ್ಚಿದರು. ಶಾಡಲಗೇರಿ ದಂಪತಿಗಳು ನಮ್ಮ ಭಾಗದ ಉತ್ತಮ ಕವಿ; ವಿಮರ್ಶಕರಾಗಿ ಬೆಳೆಯಬಹುದೆಂಬ ಭಾವನೆ ಮೂಡಿಸಿ-ದ್ದರು. ಈ ಗೆಳೆಯರ ಸಾವಿನ ನೋವು ನಮ್ಮನ್ನು ಕಾಡುವಂತೆ ದೂರದ ಬಾಂಬೆಯಲ್ಲಿ ಸತ್ತವರ,ನೊಂದವರ ನೋವು ಅಗಲಿಕೆಯ ಹಿಂಸೆ ನಮ್ಮನ್ನು ಮಾನವೀಯತೆಯೆಡೆಗೆ ತುಡಿಸಬೇಕು. ಇಂತಹ ಘಟನೆಗಳು ಮರುಕಳಿಸದಂತೆ ಬುನಾದಿಯಿಂದ ಕಟ್ಟಲು ತೊಡಗಬೇಕಾಗಿದೆ.

ಗೆಳೆಯ ಶಾಡಲಗೇರಿಯವರ ಬರೆದ ಕವಿತೆ ನಮ್ಮ ಪತ್ರಿಕೆಯಲ್ಲಿ ಜುಲೈ-ಅಗಸ್ಟ ೯೨ ರ ಸಂಚಿಕೆಯಲ್ಲಿ ಪ್ರಕಟಗೊಂಡಿತ್ತು.

**ಗೆಳತಿ,**

ನೀನು ಮಾತಿಗೊಮ್ಮೆ
ಸಾಯುವ ಮಾತನಾಡುವೆ
ಕಾರಣ; ನಿನ್ನ ಪ್ರಾಣ ನನ್ನಲ್ಲಿದೆ
ನಾನು ಸಾಯುವ ಮಾತಾಡೆ
ಯಾಕೆಂದರೆ ನನ್ನ ಪ್ರಾಣ ನಿನ್ನಲ್ಲಿದೆ.
ಎರಡು ಪ್ರಾಣಗಳು ಒಟ್ಟಿಗೆ ಇಲ್ಲವಾದದ್ದು ಮನ ಕಲಕಿದೆ.

ಈ ಸಂಚಿಕೆ ಸ್ವಲ್ಪ ತಡವಾಯಿತು. ಕ್ಷಮಿಸಿ. ಹೊಸ ಮುದ್ರಣಾಲಯ, ಆರಂಭದ ತೊಂದರೆಗಳು, ಹೊಸಪ್ರತ್ತಿ; ಹಾಗಾಗಿ ಪತ್ರಿಕೆ ಹೊರ ತರುವಷ್ಟರಲ್ಲಿ ಇಷ್ಟಾಯಿತು.

ಕಳೆದ ವರ್ಷ ಜೂನ ೧ ರಂದು ಬಿಡುಗಡೆಗೊಂಡ ಪತ್ರಿಕೆಗೆ ಮುಂದಿನ ಸಂಚಿಕೆಗೆ ಒಂದು ವರ್ಷ ತುಂಬುತ್ತಿದೆ. ನಮ್ಮವರು, ಸಾಹಿತ್ಯಾಸಕ್ತರು, ಲೇಖಕರು ಆದ ನೀವೆಲ್ಲಾ ಈ ಹೊಸ ದಿಕ್ಕಿಗೆ ವರ್ಷ ತುಂಬುವ ಸಂದರ್ಭದಲ್ಲಾದರು ಚಂದಾ ಹಣ ಕಳಿಸಿ ಪತ್ರಿಕೆಯ ಬೆಳವಣಿಗೆಗೆ ಕಾರಣರಾಗುತ್ತೀರಿ ಎಂದುಕೊಂಡಿರುವೆ.

ಪ್ರಮಾಣಿಕವಾಗಿ ಪತ್ರಿಕೆ ನಡೆಸುವದು, ವ್ಯವಸ್ಥೆಯನ್ನು ವಿರೋಧಿಸಿ ಬದುಕುವದು, ಈ ನೆಲದಲ್ಲಿ ಅದೆಷ್ಟು ಕಷ್ಟ ಅಲ್ಲವೆ? ದೂರದ ದಾವಣಗೇರಿಯಲ್ಲಿ "ಷಣ್ಮುಖ"ನ ಪ್ರಜಾ ಕೂಗು ನಿಂತಿದೆ. ಅದನ್ನು ಓದಿದವರೆಲ್ಲಾ ಚಂದಾ ಹಣ ನೀಡಿದ್ದರೆ ಅದನ್ನು ಉಳಿಸಿಕೊಳ್ಳಬಹುದಾಗಿತ್ತು. ಈಗಲೂ ಕಾಲ ಮಿಂಚಿಲ್ಲ ಯೋಚಿಸಿ.

— **ತಿಮ್ಮಯ್ಯ ಪುರ್ಲೆ**

# ಪ್ರಾಮಾಣಿಕತೆ - ಒಂದು ಮೌಲ್ಯ



ಪ್ರೊ. ಕೆ. ವಿಶ್ವನಾಥ



ಪ್ರಾಮಾಣಿಕತೆಯು ಪ್ರಜ್ಞಾಶೀಲ ಮಾನವಲೋಕದ ಪರಿಕಲ್ಪನೆ. ಸುಸಂಸ್ಕೃತ ಸಮಾಜದಲ್ಲಿರುವ ಸರ್ವರಿಗೂ ಪ್ರಾಮಾಣಿಕತೆಯ ಪರಿಚಯವಿದ್ದೆ ಇರುತ್ತದೆ. ಆದರೆ ನಿಖರವಾಗಿ ಅದರ ವ್ಯಾಖ್ಯೆ ಹೇಳುವುದು ಸುಲಭ ಸಾಧ್ಯವಲ್ಲ. ಮನುಕುಲದ ಕಲ್ಯಾಣ, ಸಮಾಜಾಭಿವೃದ್ಧಿಯಂಥ ಉದ್ದೇಶಗಳಿಂದ ಉದ್ಭವಗೊಂಡ ಪ್ರಾಮಾಣಿಕತೆಯು ಒಂದು ನೈತಿಕ ಮೌಲ್ಯ. ಅಂತೇ ಅದು ಧಾರ್ಮಿಕ ಮೌಲ್ಯವೂ ಹೌದು., ಸಾಮಾಜಿಕ ಮೌಲ್ಯವೂ ಹೌದು., ಜೀವನ ಮೌಲ್ಯವೂ ಹೌದು.

ಜೀವಿಯ ಹುಟ್ಟು-ಸಾವುಗಳ ಮಧ್ಯದ ಅವಧಿಯನ್ನು ನಾವು ಜೀವನ ಎಂದು ಕರೆಯುತ್ತೇವೆ. ಮಾನವನ ಜೀವನವು ಸುಖಮಯವಾಗಲಿ, ಸಮೃದ್ಧ-ವಾಗಲಿ ಎಂದೇ ಪ್ರಾಮಾಣಿಕತೆ ಮೌಲ್ಯದ ಸೃಷ್ಟಿಯಾದದ್ದು. ಯಾವ ವ್ಯಕ್ತಿ ಪ್ರಾಮಾಣಿಕತೆಯನ್ನು ತನ್ನ ಬದುಕಿನಲ್ಲಿ ಅಳವಡಿಸಿಕೊಂಡಿರುತ್ತಾನೋ ಆತನನ್ನು ನಾವು ಸದ್ಗುಣಿ ಎಂದು ಕರೆಯುತ್ತೇವೆ. ಆದಕ್ಕಾಗಿ ಪ್ರಾಮಾಣಿಕತೆಯನ್ನು ಒಂದು ಸದ್ಗುಣವೆನ್ನಬಹುದು.

ಪ್ರಾಮಾಣಿಕತೆಯ ಸ್ವರೂಪ, ಹರವು ಮತ್ತು ವ್ಯಾಪಕತೆಯನ್ನು ತಿಳಿದುಕೊಳ್ಳುವ ಮೊದಲು ನಾವು ಮೌಲ್ಯದ ಪರಿಕಲ್ಪನೆಯನ್ನು ಅರ್ಥ ಮಾಡಿ-ಕೊಳ್ಳುವುದು ಅವಶ್ಯವಾಗಿದೆ. 'ಮೌಲ್ಯ' ಎಂಬ ಪದವು 'ಮೂಲ್ಯ' ಎಂಬ ಧಾತುವಿನಿಂದ ನಿಷ್ಪನ್ನವಾದುದು. ಮೌಲ್ಯವೆಂದರೆ ಬೆಲೆ, ಕಿಮ್ಮತ್ತು, ಪ್ರಮುಖ-

ವಾದುದು ಅವಶ್ಯವಾದುದು ಎಂದರ್ಥ. ಯಾವುದು ನಮ್ಮ ಜೀವನಕ್ಕೆ ಬೆಲೆ ಮತ್ತು ಬಲವನ್ನು ತಂದುಕೊಡಬಲ್ಲುದೋ; ವ್ಯಕ್ತಿ ಮತ್ತು ಸಮಾಜಕ್ಕೆ ಅನಿ–ವಾರ್ಯ ಅವಶ್ಯಕತೆಯಾಗಿದೆಯೋ ಅದನ್ನೇ ನಾವು 'ಮೌಲ್ಯ' ಎನ್ನ–ಬಹುದು. ಮೌಲ್ಯವು ಮಾನವ ಕುಲಕ್ಕೆ ಮೂಲಭೂತ ಅವಶ್ಯಕತೆಯಾಗಿದೆ. 'ಮೂಲ' ಎಂದರೆ ಬುನಾದಿ, ಬೇರು, ತಳ ಎಂದರ್ಥ. ಕಟ್ಟಡಕ್ಕೆ ಬುನಾದಿ, ಮರಕ್ಕೆ ಬೇರು, ತಂಬಿಗೆಗೆ ತಳ ಹೇಗೆ ಆಧಾರ ಸ್ತಂಭವಾಗಿವೆಯೋ ಹಾಗೆಯೇ ವ್ಯಕ್ತಿಗೆ; ಸಮಾಜಕ್ಕೆ ಮೌಲ್ಯಗಳು ಅಗತ್ಯ ಅಂಶಗಳಾಗಿವೆ; ಜೀವ–ಜೀವಾಳ–ವಾಗಿವೆ; ಭದ್ರ ಬುನಾದಿಯಾಗಿವೆ.

ಮಾನವ ಸಮಾಜ ಜೀವಿ, ಸಹ ಮಾನವರ ಜೊತೆ ಸಂಬಂಧಗಳನ್ನೇ–ರ್ಪಡಿಸುವುದು; ಪರಸ್ಪರ ಸಹಕಾರವನ್ನು ಕುದುರಿಸುವುದು; ಸಹಜೀವಿಯಾಗಿ ಕೂಟದೊಂದಿಗೆ ಬದುಕುವುದು ಇತ್ಯಾದಿ ಸ್ವಭಾವಗಳು, ಮನುಷ್ಯನಿಗೆ ನಿಸರ್ಗ–ವಿತ್ತ ಕೊಡುಗೆ. ಮಾನವೀಯ ಸಂಬಂಧಗಳನ್ನು ಗಟ್ಟಿಗೊಳಿಸಲು, 'ಸಹಜೀವತ್ವ'ವನ್ನು ಸಮರ್ಥವಾಗಿ ಸಾಗಿಸಲು; ಮನುಷ್ಯ ಕೆಲವೊಂದು ಕಟ್ಟು-ಕಟ್ಟಳೆಗಳನ್ನು-ನಿಯಮ–ಆಚಾರಗಳನ್ನು ರೂಪಿಸಿಕೊಂಡಿದ್ದಾನೆ. ಆ ಮೂಲಕ ಸಮಾಜದ ಸ್ವಾಸ್ಥ್ಯವನ್ನು ಕಾಯ್ದುಕೊಂಡು ಜೀವನವನ್ನು ಸುಂದರ–ಸುಗಮವಾಗಿರಿಸಿ–ಕೊಂಡಿದ್ದಾನೆ.

ಬುದ್ಧಿಜೀವಿಯಾದ ಮಾನವನು ಒಳಿತು–ಕೆಡಕುಗಳನ್ನು ಗುರುತಿಸ–ಬಲ್ಲವನಾಗಿದ್ದಾನೆ. ಈ ರೀತಿಯಾಗಿ ಸರಿ–ತಪ್ಪು, ಹಿತ–ಅಹಿತ, ಒಳಿತು–ಕೆಡಕು–ಗಳನ್ನು ಗುರುತಿಸುವಲ್ಲಿಯೇ ಮೌಲ್ಯಗಳು ರೂಪುಗೊಳ್ಳುತ್ತವೆ. ಅಂದರೆ ಯಾವುದು ಮಾನವ ಸಮಾಜದ ಅಭಿವೃದ್ಧಿಗೆ, ಸಂವರ್ಧನೆಗೆ ಪೂರಕ ಮತ್ತು ಪೋಷಕ–ವಾಗುವುದೋ ಅದೇ ಮೌಲ್ಯವಾಗುತ್ತದೆ. ಉದಾಹರಣೆಗೆ : ಸುಳ್ಳಾಡದಿರುವುದು, ಇತರರ ಸಂಪತ್ತನ್ನು ಕದಿಯದಿರುವುದು, ಸಹಮಾನವರಿಗೆ ವಂಚನೆಗೈಯದಿರುವು–ದರಿಂದ ಸಮಾಜ ಜೀವನಕ್ಕೆ ಒಳ್ಳೆಯದಾಗುತ್ತದೆಯೆಂದು ನಾವು ನಂಬುತ್ತೇವೆ. ಇದರಿಂದಾಗಿ ಸುಳ್ಳಾಡದಿರುವುದು, ಕದಿಯದಿರುವುದು, ವಂಚನೆ ಮಾಡದಿರುವುದು ನಮಗೆ ಮೌಲ್ಯಗಳಾಗುತ್ತವೆ. ಅವು ಮನುಷ್ಯ ಲೋಕದ ಮಾರ್ಗದರ್ಶಕ ಸೂತ್ರಗಳಾಗುತ್ತವೆ.

ಮನುಷ್ಯನು ತನ್ನ ಹಿತಕ್ಕಾಗಿ, ಸಮಾಜದ ಕಲ್ಯಾಣಕ್ಕಾಗಿ ಮೌಲ್ಯಗಳನ್ನು ನಿರ್ಮಿಸಿಕೊಂಡಿದ್ದಾನೆ. ವ್ಯಕ್ತಿ ಮತ್ತು ಸಮಾಜದಲ್ಲಿ ಪರಿವರ್ತನೆಯಾದಂತೆ ಮೌಲ್ಯಗಳೂ ಬದಲಾಗುತ್ತವೆ. ವ್ಯಕ್ತಿಯಿಂದ ವ್ಯಕ್ತಿಗೆ, ಸ್ಥಳದಿಂದ ಸ್ಥಳಕ್ಕೆ, ಕಾಲದಿಂದ ಕಾಲಕ್ಕೆ ಮೌಲ್ಯಗಳು ವ್ಯತ್ಯಾಸವಾಗುತ್ತವೆ. ಆದರೆ ಕೆಲವು ಮೌಲ್ಯಗಳು ಮಾತ್ರ ಸಾರ್ವಕಾಲಿಕ ಸಾರ್ವತ್ರಿಕವಾಗಿದ್ದು ಸರ್ವ ಜನಾಂಗದಲ್ಲೂ ಆದರಣೆ ಪಡೆಯುತ್ತವೆ. ಅಂಥವುಗಳಿಗೆ ಶಾಶ್ವತ ಮೌಲ್ಯಗಳೆಂದು ಕರೆಯಲಾಗುತ್ತದೆ.

ಈ ಹಿನ್ನೆಲೆಯಲ್ಲಿ ಪ್ರಾಮಾಣಿಕತೆಯು ಒಂದು ಸಾರ್ವಕಾಲಿಕ, ಸಾರ್ವತ್ರಿಕ ಶಾಶ್ವತ ಮೌಲ್ಯ. ಮಾನವೀಯ, ಧಾರ್ಮಿಕ, ನೈತಿಕ, ಸಾಮಾಜಿಕ ಮೌಲ್ಯವೂ ಇದಾಗಿದೆ. ಪ್ರಾಮಾಣಿಕತೆಯು ನಿತ್ಯನೂತನವಾದುದು. ಸತ್ಯಕೇಡಿಲ್ಲದುದು, ಕೊಟ್ಟ ಮಾತಿಗೆ ತಪ್ಪದಿರುವುದೇ ಆಗಿದೆ. ಪ್ರಾಮಾಣಿಕತೆಯನ್ನು ಬದುಕಿನಲ್ಲಿ ಅಳವಡಿಸಿಕೊಂಡರೆ ವ್ಯಕ್ತಿಗೂ ಹಿತ; ಸಮಾಜಕ್ಕೂ ಹಿತ. ಮಹಾಮಹಿಮರಾದ ಶರಣರು, ಸಂತರು, ಮಹಾತ್ಮರು ತಮ್ಮ ದಿನ ನಿತ್ಯದ ಚಟುವಟಿಕೆಗಳಲ್ಲಿ ಪ್ರಾಮಾಣಿಕತೆ ಎಂಬ ಮೌಲ್ಯವನ್ನು ಅಳವಡಿಸಿಕೊಂಡು ಜೀವಿಸಿದ್ದಾರೆ ಅದರಿಂದ ತಾವೂ ದೊಡ್ಡವರಾದುದಲ್ಲದೆ; ಸಮಾಜೋದ್ಧಾರವನ್ನೂ ಮಾಡಿದ್ದಾರೆ. ಪ್ರಾಮಾಣಿಕತೆಗೆ ವ್ಯಾಖ್ಯೆ ಬರೆದಂತಿರುವ ಬಸವಣ್ಣನವರ ಪ್ರಸಿದ್ಧ ವಚನವನ್ನು ಇಲ್ಲಿ ಉದಾಹರಿಸಬಹುದಾಗಿದೆ.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ;
ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ,
ತನ್ನ ಬಣ್ಣಿಸ ಬೇಡ, ಇದಿರ ಹಳಿಯಲು ಬೇಡ,
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,
ಇದೇ ನಮ್ಮ ಕೂಡಲ ಸಂಗಮ ದೇವರನೊಲಿಸುವ ಪರಿ.

ಪ್ರಾಮಾಣಿಕತೆಯು ಸಾಮಾನ್ಯವಾಗಿ ಕಳವು ಮಾಡದೇ, ಸತ್ಯವನ್ನು ಪರಿಪಾಲಿಸುವುದಾಗಿದೆ. ಹಾಗು ಅಹಿಂಸೆ, ಅಸೂಯೆ, ಸಂಯಮ, ಪ್ರೇಮ, ಧೈರ್ಯ ಮುಂತಾದ ಅಂಶಗಳು ಇಲ್ಲಿ ಸಮಾವೇಶಗೊಂಡಿವೆ. ಅಂದರೆ ಸತ್ಯ, ಅಸಂಗ್ರಹ,

ಅಹಿಂಸೆ, ಅಸೂಯೆ, ಸಂಯಮ, ಪ್ರೇಮ, ಧೈರ್ಯಗಳಂಥ ಉಪ ಮೌಲ್ಯಗಳನ್ನು ತನ್ನಲ್ಲಿ ಗರ್ಭೀಕರಿಸಿಕೊಂಡಿರುವ ಒಂದು ಅಖಂಡವಾದ ಪರಿಪೂರ್ಣ ಮೌಲ್ಯ, ಪ್ರಾಮಾಣಿಕತೆ.

## ನಮ್ಮ ಸಮಸ್ಯೆ :

ನಾವಿಂದು ನಂಬಿದ ಮೌಲ್ಯಗಳಿಗೆ ತಿಲಾಂಜಲಿಯನ್ನಿತ್ತು; ಅಪ ಮೌಲ್ಯಗಳಿಗೆ ಇಂಬುಗೊಟ್ಟಿದ್ದೇವೆ. ಸತ್ಯವನ್ನು ಸಮ್ಮತಿಸಿ; ಸುಳ್ಳಾಡುತ್ತೇವೆ. ಸಂಯಮವನ್ನು ನಂಬಿಯೂ ಸ್ವೇಚ್ಛಾಚಾರಿಗಳಾಗಿದ್ದೇವೆ. ಅಹಿಂಸೆಯನ್ನು ಒಪ್ಪಿ; ಹಿಂಸೆಯನ್ನು ಅಪ್ಪಿಕೊಂಡಿದ್ದೇವೆ. ಪ್ರಾಮಾಣಿಕತೆಯಿಂದ ಅಪ್ರಾಮಾಣಿಕತೆಯೆಡೆಗೆ ವಾಲಿದ್ದೇವೆ. ಪ್ರಸ್ತುತ ಪರಿಸರದಲ್ಲಿಯಂತೂ ಅಪ್ರಾಮಾಣಿಕತೆ, ವಂಚನೆ, ಹಿಂಸೆ, ಸ್ವೇಚ್ಛಾಚಾರಗಳೇ ಮೌಲ್ಯಗಳೆನ್ನುವಷ್ಟರ ಮಟ್ಟಿಗೆ ಎಡೆ ಪಡೆದಿವೆ. ಅಪಾಯಕಾರಿಯಾದ ಈ ಬೆಳವಣಿಗೆಯು ಸಮಾಜದ ಹಿತ ದೃಷ್ಟಿಯಿಂದ ಒಳ್ಳೆಯದಲ್ಲ. ಇಂಥ ಬೆಳವಣಿಗೆಗೆ ಹಲವಾರು ಕಾರಣಗಳೂ ಇವೆ. ಅವುಗಳಲ್ಲಿ :

1. ಅತಿಯಾದ ಸಂಪತ್ತಿನ ಆಕರ್ಷಣೆ.
2. ಸಂಯಮದ ಅಭಾವ.
3. ತೀರದ ದಾಹ (ಸಂತೃಪ್ತಿಯ ಅಭಾವ).
4. ಹೃದಯ ಶೂನ್ಯ ತಾಂತ್ರಿಕ ಜ್ಞಾನ.

ಮುಂತಾದವು ಪ್ರಮುಖವಾಗಿವೆ. ಸದ್ಯದ ಸಾಮಾಜಿಕ ಸ್ಥಿತಿ-ಗತಿಯನ್ನು ಗಮನಿಸಿದರೆ, ನಮಗೆ ಎಲ್ಲೆಲ್ಲೂ ನಿರಾಸೆಯೇ ಕಾದಿರುವಂತೆ ಕಾಣುತ್ತದೆ. ಪ್ರಾಮಾಣಿಕತೆಯನ್ನು ಮೌಲ್ಯವೆಂದು ಬೌದ್ಧಿಕವಾಗಿ ನಂಬುವ ನಾವು; ಮಾನಸಿಕವಾಗಿ ಅಪ್ರಾಮಾಣಿಕರಾಗಿದ್ದೇವೆ. ಅಂತೆಯೇ ನಾವೀಗ ಅವನತಿಯ ಅಂಚಿನಲ್ಲಿದ್ದೇವೇನೋ ಎಂಬಂತೆ ಭಾಸವಾಗುತ್ತಿದೆ. ಪ್ರಾಮಾಣಿಕತೆಯನ್ನು ನಮ್ಮ ಬದುಕಿನ ಅವಿಭಾಜ್ಯ ಅಂಗವನ್ನಾಗಿ ಮಾಡುವುದು ಹೇಗೆಂಬುದೇ ಈಗ ನಮ್ಮ ಸಮಸ್ಯೆಯಾಗಿದೆ.

## ಪರಿಹಾರ :

ಮಹಾತ್ಮಾ ಗಾಂಧೀಜಿಯವರು ಹೇಳುವಂತೆ ಮನುಷ್ಯ ಮೂಲತಃ ಕೆಟ್ಟವನಲ್ಲ. ಅವನು ದಯಾಮಯ; ಕರುಣಾಸಾಗರನಾಗಿದ್ದಾನೆ. ಒಳ್ಳೆಯತನ

ಮನುಷ್ಯನ ಹುಟ್ಟುಗುಣವಾದುದರಿಂದ; ಅಹಿಂಸೆ-ಪ್ರಾಮಾಣಿಕತೆಗಳು ಅವನಿಗೆ ಸಹಜ ಸ್ವಭಾವಗಳಾಗಿವೆ. ಆದರೆ ಬಾಹ್ಯ ಕಾರಣಗಳಿಂದ, ಪರಿಸರ-ಪ್ರಭಾವಗಳಿಂದ ಮನುಷ್ಯ ದೋಷಪೂರಿತನಾಗಿ ಬೆಳೆಯುತ್ತಿದ್ದಾನೆ. ಕೆಟ್ಟವನಾಗಿ ರೂಪುಗೊಳ್ಳುತ್ತಿದ್ದಾನೆ. ಒಂದು ವೇಳೆ ಮನುಷ್ಯ ಸ್ವಭಾವತ: ಕೆಟ್ಟವನಾಗಿದ್ದರೆ ಇಂದು ಸಮಾಜವು ಅಸ್ತಿತ್ವದಲ್ಲಿರುತ್ತಿರಲಿಲ್ಲ. ಎಂದೋ ಹಾಳಾಗಿ ಹೋಗುತ್ತಿತ್ತು. ಸಮಾಜವು ಅಸ್ತಿತ್ವದಲ್ಲಿದೆಯೆಂದರೆ ಮನುಷ್ಯ ಒಳ್ಳೆಯವನಿದ್ದಾನೆಂದೇ ಅರ್ಥ. ಕಾರಣ ನಾವು ಸಂಪೂರ್ಣ ನಿರಾಶರಾಗಬೇಕಿಲ್ಲ. ಭರವಸೆಯನ್ನು ಕಳೆದು ಕೊಂಡು ಕೈ ಚೆಲ್ಲಿ ಕುಳಿತುಕೊಳ್ಳಬೇಕಾದ ಅಗತ್ಯವಿಲ್ಲ. ಈ ದಿಸೆಯಲ್ಲಿ ಕಾಳಜಿಪೂರ್ವಕವಾದ ಪ್ರಯತ್ನ ನಡೆಯಬೇಕಾಗಿದೆ. ಕೇವಲ ಕಾಯ್ದೆ-ಕಾನೂನುಗಳಿಂದ, ದಂಡ ಮತ್ತು ಶಿಕ್ಷೆಗಳ ಮೂಲಕ ಭಯವನ್ನು ಸೃಷ್ಟಿಸುವುದರಿಂದ ಮನುಷ್ಯನನ್ನು ತಿದ್ದಲು ಹೋಗುವುದು ಸಾಧುವೂ ಅಲ್ಲ; ಅದು ಸಾಧ್ಯವೂ ಇಲ್ಲ. ಅಂದ ಮಾತ್ರಕ್ಕೆ ಬರಹ - ಭಾಷಣಗಳಿಂದ; ವಾದ-ಪ್ರತಿವಾದಗಳಿಂದ; ವ್ಯಾಖ್ಯೆ-ವ್ಯಾಖ್ಯಾನಗಳಿಂದ ಇದನ್ನು ಸಾಧಿಸಬಹುದೆಂದು ಭಾವಿಸುವುದೂ ಸಮಂಜಸವಲ್ಲ. ಇಂಥ ಪ್ರಯತ್ನಗಳು ಕೌಟುಂಬಿಕ ನೆಲೆಯಲ್ಲೇ ಆರಂಭವಾಗಬೇಕು. ಅಂದರೆ ವ್ಯಕ್ತಿಯನ್ನು ಬಾಲ್ಯಾವಸ್ಥೆಯಿಂದಲೇ ಪ್ರಾಮಾಣಿಕನನ್ನಾಗಿ ರೂಪಿಸಲು ಪ್ರಯತ್ನಿಸಬೇಕು. ಹೆತ್ತವರು, ಸ್ನೇಹಿತರು, ಗುರು-ಹಿರಿಯರು ಮಗುವಿನಲ್ಲಿ ಮೌಲ್ಯಗಳನ್ನು ರೂಢಿಸಲು ಶ್ರಮಿಸಬೇಕು. ಸ್ವತ: ತಾವೂ ಮೌಲಿಕ ಬದುಕನ್ನು ಬದುಕಬೇಕು. ಮಕ್ಕಳಿಗೂ ಅದನ್ನು ಕಲಿಸಬೇಕು. ಮನುಷ್ಯ ಅನುಕರಣಶೀಲ ಪ್ರಾಣಿ ಎಂಬುದನ್ನು ನಾವು ಮರೆಯಬಾರದು. ಅದರಲ್ಲೂ ಒಳಿತನ್ನು, ಹಿತವನ್ನು ಅವನು ಮೊದಲು ಅನುಸರಿಸುತ್ತಾನೆ. ಆದರ್ಶ ಕೇವಲ ಉಪದೇಶಕ್ಕೆ ವಸ್ತುವಾಗದೆ, ಅನುಷ್ಠಾನದಲ್ಲಿ ಬಂದು ಬದುಕಿನ ರೀತಿಯಾಗಬೇಕು. ಇದರಿಂದ ಮುಂದಿನ ಪೀಳಿಗೆ ತಂತಾನೇ ಪ್ರಾಮಾಣಿಕರಾಗಿ ರೂಪುಗೊಳ್ಳುತ್ತಾರೆ.

ಸಾರ್ವಜನಿಕ, ಸಾಮಾಜಿಕ ಸಂಸ್ಥೆಗಳಾದ ಕುಟುಂಬ, ಸಂಘ, ಶಾಲೆ ಕಾಲೇಜುಗಳು ಮೌಲ್ಯಗಳನ್ನು ಕಲಿಸುವ ಮಾದರಿ ಸಂಸ್ಥೆಗಳಾಗಬೇಕು. ಆಗ ಖಂಡಿತವಾಗಿಯೂ ಯಶಸ್ಸು ದೊರೆಯುತ್ತದೆ. ಪ್ರಾಮಾಣಿಕತೆ ನಮ್ಮೆಲ್ಲ, ಬದುಕಿನ ಅವಿಭಾಜ್ಯ ಅಂಗವಾಗುತ್ತದೆ.



# ಬಂಡಾಯ ಮನೋಭಾವ

## ಒಂದು ಸಂಕ್ಷಿಪ್ತ ವಿಶ್ಲೇಷಣೆ



- ಡಾ|| ಬಸವರಾಜ ಸಬರದ.



'ಬಂಡಾಯ'ವೆಂಬುದೊಂದು ಮನೋಭಾವ. ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಅದಕ್ಕೊಂದು ಪರಂಪರೆಯಿದೆ. ಆ ಪರಂಪರೆ ಅಧಿಕೃತವಾಗಿ ವಚನಕಾರರಿಂದ ಪ್ರಾರಂಭವಾಗುತ್ತದೆ. ಇಂದಿನ ದಲಿತ ಬಂಡಾಯ ಚಳುವಳಿಗಳ ಸಂದರ್ಭದಲ್ಲಿ 'ಬಂಡಾಯ' ಒಂದು ಮೌಲ್ಯವಾಗಿ ಬೆಳೆಯತೊಡಗಿದೆ. ಈ ಚಳುವಳಿಗಳ ಹಿಂದೆ ವಚನಕಾರರ ಪ್ರೇರಣೆಯೂ ಇದೆ. ಹೀಗೆ ಬಂಡಾಯ ಪದವನ್ನು ಒಂದು ಮನೋಧರ್ಮವನ್ನಾಗಿ, ಒಂದು ಮೌಲ್ಯವನ್ನಾಗಿ ಬೆಳೆಸಲೆತ್ನಿಸಿದೆ.

'ಬಂಡಾಯ'ವೆಂದರ ಬಡಿ, ಹೊಡಿ, ಕಡಿ ಎಂದರ್ಥವಲ್ಲ. ನಿಜವಾದ ಬಂಡಾಯ ದಯೆಯ ಹೊಟ್ಟೆಯಲ್ಲಿ ಹುಟ್ಟುತ್ತದೆ. ಮಾನವೀಯತೆಯ ಹೃದಯದಲ್ಲಿ ಅರಳುತ್ತದೆ. ಸಮಾನತೆಯ ಸಮಾಜವನ್ನು ಕಟ್ಟಲೆತ್ನಿಸುತ್ತದೆ. ಹೊಸ ಮನುಷ್ಯನನ್ನು ಹುಡುಕುವ, ಮನಸ್ಸನ್ನು ಕಟ್ಟುವ ಜೀವನ ಪ್ರೀತಿಯನ್ನು ಕಲಿಸುವ ಅನಿವಾರ್ಯ ಸತ್ಯವೇ ಬಂಡಾಯ. ಮಾನವೀಯ ಒಳನೋಟಗಳೇ ನಾಶವಾದ ಸಂದರ್ಭದಲ್ಲಿ ಅತ್ಯಾಚಾರ – ಶೋಷಣೆಗಳೇ ಹೆಚ್ಚಾದ ಸಮಯದಲ್ಲಿ: ಸಾಮಾನ್ಯ ಜನತೆಯ ಬದುಕಿಗಾಗಿ, ಸಮಾನತೆಗಾಗಿ ವ್ಯವಸ್ಥೆಯ ವಿರುದ್ಧದ ಪ್ರತಿಭಟನೆಯೇ ಬಂಡಾಯ, ಇಂತಹ ಪ್ರತಿಭಟನೆ ಜನಪರ ಸಿದ್ಧಾಂತಗಳನ್ನು ವಿಶಾಲವಾದ ತಾತ್ವಿಕ ತಳಹದಿಯನ್ನು ಹೊಂದಿಸಬೇಕಾಗುತ್ತದೆ. ನಿಜವಾದ ಬಂಡಾಯಗಾರ ಹೋರಾಟ ವಿಶ್ಲೇಷಣೆಗಳನ್ನು ಜತೆ–ಜತೆಯಾಗಿಯೇ ಮಾಡುತ್ತ ವಿಮರ್ಶೆ–ಸ್ವವಿಮರ್ಶೆಗಳನ್ನು ಒಟ್ಟೊಟ್ಟಿಗೆ ನಡೆಸಿರುತ್ತಾನೆ. ಪ್ರತಿಭಟನೆಯೊಂದೇ ಬಂಡಾಯವಲ್ಲ, ಅದು ಬಂಡಾಯದ ಒಂದು ಭಾಗ. ರೊಚ್ಚು–ಆವೇಶಗಳು ಮಾತ್ರವೇ ಬಂಡಾಯವಲ್ಲ, ಅದು ನೊಂದವರ. ಶೋಷಿತರ ಸಹಜ ಪ್ರತಿಕ್ರಿಯೆ,

ಚಲನಶೀಲವಾದುದನ್ನು ಉಳಿಸಿಕೊಂಡು ಸೃಜನಶೀಲವಾದುದನ್ನು ಬೆಳೆಸುವುದೇ ನಿಜವಾದ ಬಂಡಾಯ. ಸಂಪ್ರದಾಯವನ್ನು ವಿರೋಧಿಸುತ್ತ ಪರಂಪರೆಯನ್ನು ಒಪ್ಪಿಕೊಂಡು ಹೊಸ ಮೌಲ್ಯಗಳ ಶೋಧಕ್ಕೆ ತೊಡಗುವುದೇ ಬಂಡಾಯ.

ನಿಜವಾದ ಅರ್ಥದಲ್ಲಿ ಸೃಜನಶೀಲತೆಯೇ ಬಂಡಾಯ, ಕಟ್ಟಿ ಬೆಳೆಸುವ ಕಾರ್ಯವೇ ಬಂಡಾಯ. ಅನ್ಯಾಯ ಶೋಷಣೆಗಳ ವಿರುದ್ಧ ನಡೆಯುವ ಅರ್ಥ-ಪೂರ್ಣ ಪ್ರತಿಭಟನೆಯೇ ಬಂಡಾಯ. ಸ್ಥಗಿತತೆಯನ್ನು ದಾಟಿ, ಸಾಂಪ್ರದಾಯಿಕ ಗೆರೆಗಳನ್ನು ಮೀರುವುದೇ ಬಂಡಾಯ. ಬಂಡಾಯದ ಮೂಲ ಸ್ಥಾಯಿಯೆಂದರೆ ಜೀವನ ಪ್ರೀತಿ, ಅದರ ಮುಖ್ಯ ಕನಸೆಂದರೆ ಸಮಾನತೆಯ ಸಮಾಜ ವ್ಯವಸ್ಥೆ-ಯನ್ನು ಕಟ್ಟುವದು, ಅಂತರಂಗ ಬಹಿರಂಗಗಳಲ್ಲಿ ಏಕತೆಯನ್ನು ಸಾಧಿಸಿ ನುಡಿ-ದಂತೆ ನಡೆಯುವುದು ನಿಜವಾದ ಬಂಡಾಯವಾಗುತ್ತದೆ. ಆದ್ದರಿಂದ ಬಂಡಾಯ-ವೆಂಬುದೊಂದು ಮಹತ್ವದ ಮೌಲ್ಯ, ಅದು ನಿಜವಾದ ಮನುಷ್ಯ ಧರ್ಮ.

ಬಂಡಾಯದಲ್ಲಿ ಮುಖ್ಯವಾಗಿ ಮೂರು ರೀತಿಯ ಗುಣಗಳನ್ನು ಕಾಣ-ಬಹುದಾಗಿದೆ. ಆಂತರಿಕ ಬಂಡಾಯ, ಬಹಿರಂಗದ ಬಂಡಾಯ ಮತ್ತು ಬಡಿ-ವಾರದ ಬಂಡಾಯ. ಆಂತರಿಕ ಬಂಡಾಯಕ್ಕೆ ಮಹತ್ವದ ಸ್ಥಾನವಿದೆ. ಪ್ರತಿಯೊ-ಬ್ಬರು ತಮ್ಮ ತನು-ಮನಗಳನ್ನು ಶುದ್ಧಗೊಳಿಸಿಕೊಂಡರೆ ಅನ್ಯಾಯ-ಅತ್ಯಾಚಾರಗಳ ಪ್ರಶ್ನೆಯೇಬರುವದಿಲ್ಲ. ಆಂತರಿಕ ಬಂಡಾಯದ ನಿಜವಾದ ಅರ್ಥದಲ್ಲಿ ಅನು-ಭಾವಿಯಾಗಿರುತ್ತಾನೆ, ಶರಣನಾಗಿರತ್ತಾನೆ, ಸಂತನಾಗಿರುತ್ತಾನೆ. ಬಹಿರಂಗದ ಬಂಡಾಯ ಎದ್ದು ಕಾಣುವಂತಹದು, ನೇರವಾಗಿರುವಂತಹದು. ಅಂತರಂಗದ ಬಂಡಾಯದಲ್ಲಿ ಪ್ರತಿಭಟನೆ ತನ್ನ ಸ್ಥಗಿತ ವಿಚಾರಗಳ ವಿರುದ್ಧ ನಡೆದರೆ; ಬಹಿ-ರಂಗ ಬಂಡಾಯದಲ್ಲಿ ಪ್ರತಿಭಟನೆ ಸ್ಥಗಿತ ಸಮಾಜ ವ್ಯವಸ್ಥೆಯ ವಿರುದ್ಧ ನಡೆದಿರುತ್ತದೆ. ಬಡಿವಾರದ ಬಂಡಾಯ ಬಡಬಡಿಕೆಯ ಬಂಡಾಯವಾಗಿರುತ್ತದೆ. ಅಲ್ಲಿ ಕನಸುಗಳಿರುವದಿಲ್ಲ, ಮನಸ್ಸು ಕಟ್ಟುವ ಕಾರ್ಯವೂ ನಡೆದಿರುವದಿಲ್ಲ. ಕೇವಲ ತೋರಿಕೆಗಾಗಿ ಇರುವ ಅದು ಸಪ್ಪಳಗಳ ನಡುವೆ ಕಳೆದು ಹೋಗುತ್ತದೆ. ಒಂದು ರೀತಿಯ ಡಾಂಭಿಕತೆಯಾಗುತ್ತದೆ. ಆಗ ಅದು ಬಡಾಯವಾಗುತ್ತದೆ. ಆದ್ದರಿಂದ ಬಂಡಾಯದಲ್ಲಿ ಆಂತರಿಕ ಬಂಡಾಯಕ್ಕೆ ಅತ್ಯಂತ ಪ್ರಮುಖ ಸ್ಥಾನವಿದೆ.

(ಬರುವ ಎಪ್ರೀಲ ೯, ೧೦ ರಂದು ತುಮಕೂರದಲ್ಲಿ ೧೧ ನೇ ರಾಜ್ಯ ಬಂಡಾಯ ಸಾಹಿತ್ಯ ಸಮ್ಮೇಳನ ನಡೆಯಲಿದೆ. ಅದರ ಅಂಗವಾಗಿ ಈ ಕಿರು ಲೇಖನ.)

ದಿ. ೨೮ ರಿಂದ ೩೧ ರ ಅಕ್ಟೋಬರ ೯೨ ರಲ್ಲಿ ನಡೆದ "ಕಥನ ಕಲೆಯ ನೆಲೆಗಳು" ಕಮ್ಮಟದಲ್ಲಿ ಮಂಡಿಸಿದ ಟಿಪ್ಪಣಿಗಳು. (ರಾಯಚೂರು)

# ಕಥನ ಕಲೆ : ವಸ್ತು ಮತ್ತು ತಂತ್ರ

ಕಥೆ ಎನ್ನುವುದು ಕಥಿತ ವಸ್ತು.
ಅದರ ಮುಖ್ಯ ಲಕ್ಷಣ ಕಥನ:
ಅದರ ಹಿರಿಯ ಗುಣ ಕಥನದಲ್ಲಿ ಕೌಶಲ.

-- ಶ್ರೀನಿವಾಸ

ಕಥೆ ಹೇಳುವುದು, ಕೇಳುವುದು ಭಾರತೀಯ ಪರಂಪರೆಯಲ್ಲಿ ತೀರಾ ಪರಿಚಿತವಾದ ಸಂಗತಿ ಹಾಗೂ ನಮ್ಮ ಸಂಸ್ಕೃತಿಯ ಒಂದು ಅಂಗವಾಗಿದೆ. ಜಾನಪದ ಮತ್ತು ಶಿಷ್ಟ ಈ ಎರಡು ಪರಂಪರೆಗಳಲ್ಲಿ ಕಥನಕ್ಕೆ ವಿಶೇಷವಾದ ಸ್ಥಾನವಿದೆ.

ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ 'ಸಣ್ಣಕಥೆ' ಎಂದು ಯಾವುದಕ್ಕೆ ಕರೆಯುತ್ತೇವೆಯೋ ಅದು ಇಂಗ್ಲೀಷಿನ 'Short Story' ಎಂಬುದಕ್ಕೆ ಪ್ರತಿಯಾಗಿ ಬಳಸುತ್ತಿರುವ ಪದವಾಗಿದೆ. ಈ ಪದವು ವಿಶೇಷವಾದ ಅರ್ಥವನ್ನು ಒಳಗೊಂಡಿದೆ. ಇದು ಸಾಹಿತ್ಯದ ಒಂದು ಪ್ರಕಾರವಾಗಿದ್ದು ಪರಿಮಿತ ದೀರ್ಘತೆಯ ಗದ್ಯ ನಿರೂಪಣೆ ಎಂದು ಸರಳವಾಗಿ ಹೇಳಲಾಗುತ್ತದೆ. ಸಣ್ಣ ಕಥೆಯೂ ಒಂದು ಕಲಾಕೃತಿಯಾಗಿರುವುದರಿಂದ, "ಓದಲು ಅರ್ಧ ಗಂಟೆಯಿಂದ ಒಂದು ಅಥವಾ ಎರಡು ಗಂಟೆಗಳ ಕಾಲ ತೆಗೆದುಕೊಳ್ಳುವ ಸಂಕ್ಷಿಪ್ತವಾದ ಗದ್ಯ ನಿರೂಪಣೆ" ಎಂದು ಎಡ್ಗರ್ ಅಲೆನ್ ಪೊ ಹೇಳಿದ್ದಾನೆ. ಸಂಕ್ಷಿಪ್ತವಾದ ಗದ್ಯ ನಿರೂಪಣೆ ಎಂದು ಕರೆಸಿಕೊಂಡಿದ್ದರೂ, ಸೀಮಿತ ಅವಕಾಶದಲ್ಲಿ ಒಂದು ಪ್ರಪಂಚವನ್ನು ಹುಟ್ಟುಹಾಕುತ್ತದೆ.

ಸಣ್ಣ ಕಥೆಯ ಸ್ವರೂಪ ಮತ್ತು ಲಕ್ಷಣಗಳ ಬಗ್ಗೆ ಈಗಾಗಲೇ ಸೂತ್ರರೂಪದಲ್ಲಿ ಹೇಳಿರುವ ಮಾತುಗಳನ್ನು ಗಮನಿಸುವುದಾದರೆ, 'ಮಿತವ್ಯಯದ ದೃಷ್ಟಿಯಿಂದ ಮತ್ತು ನಿಷ್ಠುರವಾಗಿ ಕೃತಿಯ ಅಗತ್ಯ' ರಚನೆಗಳನ್ನು ಗಮನ-

ದಪ್ಪಟ್ಟುಕೊಂಡು ಆಯ್ದ ಘಟನೆಗಳನ್ನು ವಿಶಿಷ್ಟವಾಗಿ ನಿರೂಪಿಸುವ ಮೂಲಕ ಸಣ್ಣ ಕಥೆಯಲ್ಲಿ Single effect ಅನ್ನು ತರಲು ಪ್ರಯತ್ನಿಸುತ್ತದೆ. .... ಯಾವುದಾದರೊಂದು ಪಾತ್ರ, ಘಟನೆ ಅಥವಾ ಭಾವನೆಯ ಮೇಲೆ ಗಮನವನ್ನು ಕೇಂದ್ರೀಕರಿಸುವ ಮೂಲಕ ಮತ್ತು ಪುನರುಕ್ತಿ ಹಾಗೂ ಅಪ್ರಸ್ತುತ ವಿಷಯಗಳನ್ನು ತ್ಯಜಿಸುವ ಮೂಲಕ Unity of Impression ಅನ್ನು ಪರಿಪೂರ್ಣತೆಯ ಭಾವನೆಯನ್ನು ಸ್ಥಾಪಿಸುತ್ತವೆ.' (ಡಿ.ಎಲ್. ನಾಗಭೂಷಣ ಸ್ವಾಮಿಯವರ 'ವಿಮರ್ಶೆಯ ಪರಿಭಾಷೆ.' ಪು. ೩೪೭)

ಭಾರತೀಯರಲ್ಲಿ ಸಣ್ಣ ಕಥೆಗಳು ಇವೆಯಾದರೂ ಈ ಬಗೆಯ ಲಕ್ಷಣ-ವನ್ನು ಒಳಗೊಂಡಿರುವುದಿಲ್ಲ. ಗೋರೂರು ರಾಮಸ್ವಾಮಿ ಅಯ್ಯಂಗಾರ ಅವರ ಮಾತಿನಲ್ಲಿ ಹೇಳುವುದಾದರೆ, "ಯಾವುದನ್ನು ನಾವು ಇಂದು ಬರೆಯುವ ಮಾದರಿ-ಯನ್ನೊಳಗೊಂಡ ಸಣ್ಣ ಕಥೆ (Short Story) ಎನ್ನುತ್ತೇವೆಯೋ ಅದು ಸಣ್ಣ ಕಥೆಯ ರೂಪದಲ್ಲಿ ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ದೊರೆಯುತ್ತಿಲ್ಲ. ಸಣ್ಣ ಕಥೆಗೆ ಕೆಲವು ಲಕ್ಷಣಗಳಿರಬೇಕೆಂದು ನಾವು ಹೇಳುತ್ತೇವೆ. ಪಂಚತಂತ್ರ, ಹಿತೋಪದೇಶ, ಬೃಹತ್ಕಥಾಮಂಜರಿ ಇವು ಆ ದೃಷ್ಟಿಯಿಂದ ಸಣ್ಣ ಕಥೆಗಳಲ್ಲ; ಬರಿಯ ಕಥೆಗಳು."

ಮನುಷ್ಯನ ಬದುಕು ನಿರಂತರವಾಗಿ ಹರಿಯುವ ಪ್ರವಾಹ. ಪ್ರತಿಕ್ಷಣವೂ ಮನುಷ್ಯನ ಬದುಕಿನಲ್ಲಿ ಏನಾದರೊಂದು ಘಟಿಸುತ್ತಲೇ ಇರುತ್ತದೆ. ಈ ಘಟಿಸುವ ಘಟನೆಗಳಿಂದ ಬದುಕಿಗೆ ಚಲನೆ ಬರುತ್ತದೆ. ಹಾಗೂ ಈ ಘಟಿಸುವ ಘಟನೆಗಳಿಗೆ ಹಲವು ಮುಖಗಳಿರುತ್ತವೆ. ಹಲವು ಮುಖಗಳು ಹಲವು ರೀತಿಯಲ್ಲಿ ಅರ್ಥ-ವನ್ನು ತುಂಬಿಕೊಂಡಿರುತ್ತವೆ. ಪ್ರತಿಭೆ ಅದನ್ನು ಗ್ರಹಿಸುವ ನೆಲೆಗಳು ಭಿನ್ನವಾಗಿ-ರುತ್ತವೆ. ಹೀಗೆ ಒಬ್ಬ ಪ್ರತಿಭಾವಂತ ಕಲೆಗಾರ ತಾನು ಬದುಕನ್ನು ಗ್ರಹಿಸುವ ನೆಲೆಗಳ ಮೇಲೆ ಒಂದು ವಸ್ತು ಸೃಷ್ಟಿಯಾಗುತ್ತದೆ. ಅಂಥದ್ದು ಕಥೆಗೆ ವಸ್ತುವಾದಾಗ ಅದನ್ನು ಹೇಗೆ ಹೇಳಬೇಕು; ಹೇಗೆ ಹೇಳಿದರೆ ತಾನು ಹೇಳುವ ವಸ್ತು ಪರಿಣಾ-ಮಕಾರಿಯಾಗಿ ಕೇಳುಗರ ಮೇಲೆ ನಿಲ್ಲುತ್ತದೆ. ಎಂದು ಯೋಚಿಸುವುದೇ ತಂತ್ರ-ವಾಗುತ್ತದೆ. ಅಂದರೆ ತನ್ನ ಅನುಭವಕ್ಕೆ ಹೊಸ ಅಥವಾ ಅರ್ಥ ನೀಡುವ ವಿಧಾನವೇ ತಂತ್ರ ಮಾಡುವ ಕೆಲಸವಾಗುತ್ತದೆ. "ಕುತೂಹಲ ಕಾಯ್ದುಡುವ, ಸ್ವಲ್ಪದರಲ್ಲಿ ಬಹಳ ಹೇಳುವ, ಬೇಸರ ಬರಿಸದಿರುವ ಪ್ರಿಯವಾದ ವಸ್ತುಗಳನ್ನು ಬಿಗ್ಗಿಲಿಸಿ ಕೇಳುವ, ಮನದಲ್ಲಿ ಮೂಡಿನಿಂತು ಎಂದೂ ಮರೆಯಲಾರದಂತೆ

ಮಾಡುವ ತೀವ್ರ ಪರಿಣಾಮ ಬೀರುವ, ಶಾಶ್ವತ ಸಂಸ್ಕಾರ ನೀಡುವ, ಉದಾತ್ತೀಕರಣವನ್ನು ಸಾಧಿಸುವ, ಕೊನೆಗೆ ಆನಂದ ಒದಗಿಸುವ ಕಾರ್ಯದಲ್ಲಿ ಬರವಣಿಗೆಯನ್ನು ಬಲ್ಲಂತೆ ಪೂರೈಸುವ ಶಕ್ತಿಯನ್ನು ತಂತ್ರದಿಂದ ಪಡೆಯುವುದು ಸಾಧ್ಯವಿದೆ. (ಜಿ.ಜಿ. ಮಹೀಶವಾಡಿಯವರ 'ಕನ್ನಡ ಕಥಾ ಸೃಷ್ಟಿ' ಪು. ೧೮)

ಕಥೆಗಾರ ತಾನು ಹೇಳುವ ಕಥೆ ತಾನೇ ಅನುಭವಿಸಿರಬಹುದು. ತನ್ನ ನೋವು, ನಲಿವು, ಬೇಗು ಅದರಲ್ಲಿರಬಹುದು ಅಥವಾ ಬೇರೆಯವರಿಂದ ಕೇಳಿ, ಕಂಡು ಅದನ್ನು ತನ್ನದಾಗಿಸಿಕೊಂಡಿರಬಹುದು. ಒಟ್ಟಿನಲ್ಲಿ ಆತ ಒಂದು ಕಥೆ ಹೇಳಲು ತೊಡಗಿದ ಅಂದರೆ, ಹೇಳುವ ಒಂದು ವಸ್ತುವನ್ನು ಒಳಗೊಂಡಿರುತ್ತದೆ: ಒಂದು ವಿಚಾರದ ಸೂತ್ರವಿರುತ್ತದೆ. ಅದು ಕಥೆಗೆ ವಸ್ತುವಾದಾಗ ಅದರಲ್ಲಿ ಬರುವ ಪಾತ್ರಗಳನ್ನು ಸನ್ನಿವೇಶದೊಂದಿಗೆ ಸಮಾವೇಶಗೊಳಿಸಿ ಒಂದು ವಿಶಿಷ್ಟವಾದ ಧ್ವನಿಯನ್ನು ಹೊರಡಿಸುವ ಪ್ರಯತ್ನ ಮಾಡುತ್ತಾನೆ. ಹೀಗೆ ಒಂದು ಧ್ವನಿಯನ್ನು ಹೊರಡಿಸಲು ಕಥೆಗಾರ ಪ್ರಯತ್ನಿಸಿದರೂ ಆ ಧ್ವನಿ ಎಷ್ಟರ ಮಟ್ಟಿಗೆ ಕಥೆಯಲ್ಲಿ ಸೂಚಿತವಾಗಿದೆ, ವ್ಯಕ್ತವಾಗಿದೆ ಎಂಬುದು ಆತ ಬಳಸುವ ತಂತ್ರವನ್ನು ಅವಲಂಬಿಸಿರುತ್ತದೆ.

"ತಂತ್ರವೆಂದರೆ ಲೇಖನ ಸಾಮಗ್ರಿಯಾದ ಅನುಭವ ತನ್ನ ಬಗ್ಗೆ ಸರಿಯಾದ ಗಮನ ಕೊಡಲು ಅವನನ್ನು ಒತ್ತಾಯಿಸುವ ಸಾಧನ; ತಂತ್ರವೆಂದರೆ ಲೇಖಕನಿಗೆ ತನ್ನ ವಸ್ತುವನ್ನು ಅನಾವರಣಗೊಳಿಸಲು, ಶೋಧಿಸಲು, ವಿಕಾಸಗೊಳಿಸಲು, ಅದರ ಅರ್ಥವನ್ನು ಸೂಚಿಸಲು ಹಾಗೂ ಕೊನೆಯದಾಗಿ ವಸ್ತುವನ್ನು ಬೆಲೆಕಟ್ಟಲು ಇರುವ ಏಕ ಮಾತ್ರ ಸಾಧನ." ಎಂದು ಮಾರ್ಕ್ ಶೋರರ್ ಹೇಳುವ ಮಾತು ಗಮನಾರ್ಹವಾದದ್ದು.

ನಮ್ಮಲ್ಲಿ ಕಥೆಗಾರರು ಎರಡು ರೀತಿಯಲ್ಲಿ ಕಥೆಯನ್ನು ಹೇಳಲು ಪ್ರಯತ್ನಿಸಿದ್ದಾರೆ. ಒಂದು ವಸ್ತು ನಿಷ್ಠವಾಗಿ: ಇನ್ನೊಂದು ವ್ಯಕ್ತಿ ನಿಷ್ಠವಾಗಿ: "ಬರಹಗಾರ ತನ್ನ ವ್ಯಕ್ತಿತ್ವವನ್ನು ಪೂರ್ತಿಯಾಗಿ ಇಲ್ಲವಾಗಿಸಿಕೊಂಡು ಅಥವಾ ಅದನ್ನು ಹಿಂಬದಿಗೆ ತಳ್ಳಿ ತನ್ನ ಕೃತಿಯ ಪಾತ್ರ, ಸನ್ನಿವೇಶ, ಕ್ರಿಯೆ, ಆಲೋಚನೆ, ಭಾವನೆಗಳನ್ನು, ತನ್ನತನವನ್ನು ತೋರಿಸುವ ಯಾವುದೇ ವ್ಯಾಖ್ಯಾನವಿಲ್ಲದಂತೆ ತನ್ನನ್ನು ಯಾವುದೇ ಒಂದು ಪಾತ್ರಕ್ಕೆ ಅಥವಾ ಆಲೋಚನೆಗೆ ಬದ್ಧಗೊಳಿಸಿಕೊಳ್ಳದಂತೆ, ತನ್ನ ನಂಬಿಕೆ, ಭಾವನೆಗಳು ಪ್ರಕಟವಾಗದಂತೆ" ಎಚ್ಚರ

ವಹಿಸಿ ಕಥೆ ಬರೆಯುತ್ತಾನೆ. ಇದು ವಸ್ತುನಿಷ್ಠ (Objectivity) ವಿಧಾನ. "ಬರಹಗಾರನು ತನ್ನ ಸ್ವಂತ ಅನುಭವಗಳನ್ನು ಅಭಿವ್ಯಕ್ತಿಸುತ್ತಾನೆ. ತನ್ನ ಕೃತಿಯಲ್ಲಿಯ ಪಾತ್ರಗಳ ಬಗ್ಗೆ ತನ್ನದೇ ಆದ ಧೋರಣೆಗಳನ್ನು ಹೊಂದಿದ್ದು ಅವನ್ನು ಸ್ಪಷ್ಟವಾಗಿಯೂ ಹೇಳುತ್ತಾನೆ. ಕೃತಿಯಲ್ಲಿ ತನ್ನ ವೈಯಕ್ತಿಕ ಅಭಿರುಚಿ, ಮೌಲ್ಯಗಳು, ಭಾವನೆ, ತೀರ್ಮಾನಗಳಿಗೆ ಪ್ರಾಮುಖ್ಯ ನೀಡುತ್ತಾನೆ." (ಸಿ.ಎಲ್. ನಾಗಭೂಷಣ ಸ್ವಾಮಿಯವರ 'ವಿಮರ್ಶೆಯ ಪರಿಭಾಷೆ' ಪು. ೩೯) ಇದು ವ್ಯಕ್ತಿನಿಷ್ಠವಾದ (Objectivity) ವಿಧಾನ. ಸಾಮಾನ್ಯವಾಗಿ ವ್ಯಕ್ತಿನಿಷ್ಠ ವಿಧಾನಕ್ಕೆ ನವ್ಯ ಕಥೆಗಳನ್ನು, ವಸ್ತುನಿಷ್ಠ ವಿಧಾನಕ್ಕೆ ಬಂಡಾಯ–ದಲಿತ ಕಥೆಗಳನ್ನು ಉದಾಹರಣೆಯಾಗಿ ಗಮನಿಸಬಹುದು.

ಆದರೆ ಕಥೆಗಾರ ಒಂದು ಸಿದ್ಧವಾದ ತಂತ್ರವನ್ನು ತೆಗೆದುಕೊಂಡು ತನ್ನ ವಸ್ತುವಿಗೆ ಅಳವಡಿಸಿಕೊಳ್ಳುತ್ತಾನೆ ಎಂದು ಅರ್ಥವಲ್ಲ. ತಂತ್ರವನ್ನು ಹೊರಗಿನಿಂದ ತರುವಂಥದ್ದಲ್ಲ. ಕಥೆಗಾರ ತಾನು ಆಯ್ದುಕೊಂಡ ವಸ್ತುವೇ ಒಂದು ತಂತ್ರವನ್ನು ಸೃಷ್ಟಿಸಿಕೊಳ್ಳಬಲ್ಲದು. ಕಥೆಗಾರ ತನ್ನ ಅನುಭವಗಳನ್ನು ಹೇಗೆ ಹೇಳಿದರೆ ಸ್ವಾರಸ್ಯ ಎನ್ನಿಸುತ್ತದೆ ಎಂಬುದನ್ನು ಯೋಚಿಸುವ ಕ್ರಮದಲ್ಲೇ ಅದರ ಗರ್ಭದಿಂದ ತಂತ್ರವೂ ಸೃಷ್ಟಿಯಾಗಿಬಿಡುತ್ತದೆ.

ಕಥೆಗಾರ ತನ್ನ ಕಥೆಯನ್ನು ಸರ್ವಸಾಕ್ಷಿ ಪ್ರಜ್ಞೆಯಲ್ಲಿ (Third Person) ಹೇಳಿರಲಿ ಅಥವಾ ನಿರೂಪಕನ (First Person) ಪಾತ್ರದಲ್ಲಿ ಹೇಳಿರಲಿ (ನಿರೂಪಕ ಒಂದು ಪಾತ್ರ ಅಷ್ಟೇ) ಅದರ ಕಥೆಯಲ್ಲಿ ಕಥೆಗಾರ ಒಂದಲ್ಲ ಒಂದು ಸ್ತರದಲ್ಲಿ ಸೇರಿಕೊಂಡಿರುತ್ತಾನೆ ಎಂಬ ವಿಷಯ ಕುತೂಹಲಕಾರಿಯಾದುದು. ವೇನ್.ಸಿ. ಬೂತ್‌ನು ಹೇಳುತ್ತಾನೆ : ಗುರುತಿಸುವ ಕಣ್ಣಿದ್ದರೆ ಕೃತಿಯಲ್ಲಿ ಲೇಖಕನ ತೀರ್ಮಾನಗಳನ್ನು ಖಚಿತವಾಗಿ ಕಾಣಬಹುದು. ಕೃತಿಯಲ್ಲಿ ಕೃತಿಕಾರನ ಅಸ್ತಿತ್ವ ಹೇಗೆ, ಎಷ್ಟು ಅಪಾಯಕಾರಿ ಎಂಬುದನ್ನು ಸುಲಭವಾಗಿ ನಿರ್ಣಯಿಸಲಾಗುವುದಿಲ್ಲ. ಕೃತಿಕಾರ ತನ್ನ ಮುಖ ಮರೆಸಿಕೊಳ್ಳುವ ತಂತ್ರಗಳನ್ನು ಹುಡುಕಿಕೊಳ್ಳಬಹುದೇ ಹೊರತು ಕೃತಿಯಿಂದ ಸಂಪೂರ್ಣವಾಗಿ ಮಾಯವಾಗುವುದು ಸಾಧ್ಯವೇ ಇಲ್ಲ."

ಆದ್ದರಿಂದ ವಸ್ತು ಮತ್ತು ಧೋರಣೆಗಳಿಂದ ತಂತ್ರವನ್ನು ಬೇರ್ಪಡಿಸಲು ಆಗುವುದಿಲ್ಲ.... ತಂತ್ರ ಲೇಖಕನ ಜೀವನದೃಷ್ಟಿಯೊಡನೆ ಅಂತರ್ಗತ ಸಂಬಂಧ

## ಪಂಪನ ಕಾವ್ಯಗಳಲ್ಲಿ ಅನಾವರಣಗೊಂಡ

# ವರ್ಣ-ಜಾತಿ ವ್ಯವಸ್ಥೆಯ ಜಿಜ್ಞಾಸೆ

ಡಾ. ಅರವಿಂದ ಮಾಲಗತ್ತಿ.

ಪಂಪ ಮೈ ತುಂಬ ಕಣ್ಣುಳ್ಳ ಒಬ್ಬ ಪ್ರಜ್ಞಾವಂತ ಕವಿ. ಒಂದರ್ಥದಲ್ಲಿ ಈತ ವಿಷದ ಹಲ್ಲುಗಳೇ ಇಲ್ಲದ, ಮೈಯಲ್ಲಿ ಎಲುವುಗಳೇ ಇಲ್ಲದ ಎರಡೂ ಕಡೆಗೆ ಮುಖವುಳ್ಳ ಆಕರ್ಷಕವಾದ ಮಣ್ಣುಕ್ಕು ಹಾವಿದ್ದಂತೆ.[1] ಈ ಕವಿಗೆ ಸಾಮಾನ್ಯವಾಗಿ ವಿಮರ್ಶಕರೆಲ್ಲರೂ "ಸಮನ್ವಯ ಕವಿ" ಎಂದು ಹೇಳಿದರೂ ಕೆಲವರು ಪಂಪನಲ್ಲಿ ಇರುವ ಅಸಮತೋಲತ್ವದ ದ್ವಂದ್ವಗಳನ್ನು ಗುರುತಿಸುತ್ತಾ ಅಪ್ರತ್ಯಕ್ಷವಾಗಿ ತಮ್ಮಲ್ಲಿರುವ ದ್ವಂದ್ವಗಳನ್ನೂ ಮುಂದಿಟ್ಟಿದ್ದಾರೆ. ಆದರೆ ವಾಸ್ತವದಲ್ಲಿ ಪಂಪನನ್ನು ನಿಖರವಾಗಿ ಸಮನ್ವಯ ಕವಿ ಎಂದು ಕರೆಯಲಾಗದು. ಬದಲಾಗಿ ಈತ ತಕ್ಕಡಿಯ ಎರಡೂ ಪೊರಟೆಗಳಲ್ಲಿ ತನ್ನೆರಡೂ ಕಾಲುಗಳನ್ನಿಟ್ಟು ತೂಗಲು ಪ್ರಯತ್ನಿಸುವ ಪ್ರಜ್ಞಾವಂತ ಕವಿಯಾಗಿ ಕಾಣುತ್ತಾನೆ.

ಅದ್ಭುತ ರೀತಿಯ ವಸ್ತುವಿನ ಆಯ್ಕೆ ಮತ್ತು ನಿರೂಪಣಾ ವಿಧಾನದಿಂದಾಗಿ ಪಂಪ ಮೆಚ್ಚದವರನ್ನು ಮೆಚ್ಚಿಸಿಕೊಂಡು ಬಿಡುತ್ತಾನೆ. ದೃಶ್ಯ ಮತ್ತು ಶ್ರವ್ಯ ಎರಡೂ ಬಗೆಯ ಸತ್ವವನ್ನು ಅಂತರ್ಗತ ಮಾಡಿಕೊಂಡು ಕುತೂಹಲವನ್ನು ಕೆರಳಿಸುತ್ತ, ಕನ್ನಡ ಸಂಸ್ಕೃತ ಭಾಷೆಗಳ ನಡುವೆ ಒಪ್ಪ ಮಾಡಿ ತನ್ನದೇ ಆದ ಛಿಡಿತವನ್ನು ಸಾಧಿಸಿದ್ದಾನೆ. ಈ ನೆಲೆಯಲ್ಲಿಯೇ ಪಂಪ ಕವಿ ಎಲ್ಲ ಬಗೆಯ ಓದುಗರನ್ನು ತನ್ನ ಮುಷ್ಟಿಯಲ್ಲಿಟ್ಟುಕೊಳ್ಳುತ್ತಾನೆ.[2]

ಪಂಪ ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ........[3] ಎಂದು ಹೇಳುವಲ್ಲಿ ಜೈನ ಶಾಸ್ತ್ರಗಳಿಗೆ ಸಂಬಂಧಿಸಿದ ಕಾವ್ಯವೊಂದಿದ್ದರೂ ಈ ಲೌಕಿಕ ಕಾವ್ಯ ಜೈನ ಧರ್ಮದಿಂದ ಹೊರತಾದುದ್ದಲ್ಲ ಎನ್ನುವ ಧ್ವನಿಯೂ ಇಲ್ಲಿ ಸೇರಿದಂತಿದೆ.

---

೧. ಹೀಗೆಂದ ಮಾತ್ರಕ್ಕೆ ಈ ಹಾವಿಗೆ ವಿಷವಿಲ್ಲ ಎಂದಲ್ಲ! ಇದಕ್ಕೆ ನಾಲಿಗೆಯಲ್ಲಿಯೇ ವಿಷವಿರುತ್ತದೆ.

೨. ಈ ಪ್ರಬಂಧದಲ್ಲಿ ಬಳಕೆಯಾಗುವ ಪದ್ಯಗಳನ್ನೆಲ್ಲ ಪಂಪನಿಂದಲೇ ರಚಿತವಾದವು ಎಂದು ಭಾವಿಸಲಾಗಿದೆ. ಕೆಲವು ಸಂದರ್ಭಗಳನ್ನು ವ್ಯಾಸ ಭಾರತದಿಂದ ಆಯ್ದುಕೊಂಡಿದ್ದರೂ ಅವುಗಳ ಮರುಹುಟ್ಟಿನ ಸೃಷ್ಟಿಕರ್ತ ಪಂಪನೆಂದೇ ತಿಳಿಯಲಾಗಿದೆ.

೩. ಪಂಪ ಭಾರತ ; 14-60

ಅರ್ಜುನನಂತಹ ಪಾತ್ರಗಳಿಗೆ ಹೆಚ್ಚು ಬೆಳೆಯಲು ಅವಕಾಶ ಸಿಕ್ಕರೆ ದ್ರೋಣರ ಪಾತ್ರ. ಮಾನಸಿಕ ಬೆಳವಣಿಗೆಯಿಂದ ಬೆಳೆಯದೆ ವಂಚಿತವಾಗಿದೆ. ಜಾತೀಯತೆಯ ಕಳಂಕವನ್ನು ಪಂಪ ಭಾರತದಲ್ಲೆಲ್ಲ ಕರ್ಣನಿಗೆ ಆವರಿಸಿಕೊಂಡು ವ್ಯಕ್ತವಾಗುವುದರಿಂದ ಕರ್ಣನ ಪಾತ್ರ ಕಳಂಕದಿಂದ ಆಳಕ್ಕಿಳಿದು ತೀವ್ರಗತಿಯಿಂದ ಪ್ರಟಿದೇಳಲು ಹೆಚ್ಚು ಬಲ ಬಂದಿದೆ. ಆದರೆ ಏಕಲವ್ಯನ ಪಾತ್ರದ ಉಚ್ಚಾಟನೆಯಿಂದಾಗಿ ಅರ್ಜುನ ಮತ್ತು ದ್ರೋಣರಿಗೆ ತಟ್ಟಬಹುದಾಗಿದ್ದ ಕಳಂಕ ದೂರವಾಗಿದೆ. ಏಂದರೆ ಎಂದರೆ ಒಂದೇ ಹೊಡೆತಕ್ಕೆ ತನ್ನ ಅರಸನಾದ ಅರಿಕೇಸರಿ ಎಂಬ ಅರ್ಜುನನನ್ನು, ತನ್ನ ಜಾತಿಯ ಬ್ರಾಹ್ಮಣನೇ ಆದ ದ್ರೋಣನನ್ನು ಘೋರ ಅಪವಾದಗಳಿಂದ ಪಾರು ಮಾಡಿದ ಪಂಪನ ಜಾಣತನ ಇಲ್ಲಿ ಹುದುಗಿಕೊಂಡಿದೆ

ಕರ್ಣನ ಕುರಿತಾಗಿ ಬರೆದವರೆಲ್ಲರೂ, ಭೀಷ್ಮರಿಗೆ ವೀರಪಟ್ಟವನ್ನು ಕಟ್ಟುವ ಪ್ರಸಂಗದ ಬಗ್ಗೆ ಮಾತನಾಡದೆ ಮುಂದೆ ಹೋಗಿಲ್ಲ. ಈ ಪ್ರಸಂಗದ ಕುರಿತು ಬರೆ-ಯುವಾಗ ಅಷ್ಟೇ ಉತ್ಸಾಹ, ತನ್ಮಯತೆಯಿಂದ ತೊಡಗಿಸಿಕೊಂಡಿರುವುದು ಕಂಡು ಬರುತ್ತದೆ. ಪರಸ್ಪರ ರಾಜಕೀಯ ಮತ್ತು ಯುದ್ಧ ನೀತಿಗಳಿಂದ ಕೂಡಿದ ಭೀಷ್ಮ-ಕರ್ಣರ ಈ ಸಂದರ್ಭದ ಕುರಿತು ಜಿಜ್ಞಾಸೆಗೆ ಇಳಿಯುವ ಮುನ್ನ, ಕರ್ಣನ ಅಂಗರ-ರಾಜ ಪಟ್ಟಾಭಿಷೇಕ ಪ್ರಸಂಗ, ಹಾಗು ಶಲ್ಯನನ್ನು ಸಾರಥಿಯಾಗಿ ಒಪ್ಪಿಸಲು ಹೋದ ದುರ್ಯೋಧನನ ಪ್ರಸಂಗಗಳನ್ನು ಮೊದಲಿಗೆ ಚರ್ಚಿಸುವುದು ಉಚಿತವೆನಿಸುತ್ತದೆ.

ಕರ್ಣ ಮತ್ತು ಅರ್ಜುನರ ಮಾತ್ಸರ್ಯದಿಂದ ವ್ಯಾಯಾಮ ಶಾಲೆಯೇ ಯುದ್ಧ ಭೂಮಿಯಾಗುವ ಸಂದರ್ಭದಲ್ಲಿ ದ್ರೋಣ, ಕೃಪರ ಮಾತಿಗೆ ಉತ್ತರ ರೂಪವಾಗಿ ಕೊಡುವ ಮಾತುಗಳು ಅಷ್ಟೇ ನಿಷ್ಠುರವಾದುವು ಮತ್ತು ಕಠೋರವಾದುವು! ಆದರೆ ಅನಂತರದಲ್ಲಿ ಈ ಕರ್ಣನನೀಗಳೇ ಕುಲಜನಂ ಮಾಡಿ ತೋರ್ಪೆನೆಂದು. ಹೇಳುವ ದುರ್ಯೋಧನನ ಮಾತುಗಳಿಂದ ಮತ್ತೆ ವ್ಯವಸ್ಥೆಯಲ್ಲಿಯ ಕುಲದ ವಿಚಾರಗಳನ್ನು ಒಪ್ಪಿಕೊಂಡಿರುವುದು ಗೋಚರವಾಗುತ್ತದೆ. ಅಲ್ಲದೆ ದುರ್ಯೋಧನ ಕರ್ಣನನ್ನು ಕುಲಜನನ್ನಾಗಿಸುವ ವಿಧಿ ಕರ್ಮಗಳಿಗಿಳಿದದ್ದು ಇವುಗಳನ್ನು ನಿಭಾಯಿಸುತ್ತಿರುವುದೇ, ವ್ಯವಸ್ಥೆಯಲ್ಲಿಯ ವಿಚಾರಗಳನ್ನು ಒಪ್ಪಿಕೊಂಡಿರುವುದು ಸ್ಪಷ್ಟಪಡಿಸುತ್ತದೆ.

ದುರ್ಯೋಧನನು ಶಲ್ಯನನ್ನು ಕರ್ಣನಿಗೆ ಸಾರಥ್ಯ ಮಾಡುವಂತೆ ಒಪ್ಪಿಸಲು ಬಂದಾಗ ಕೋಪದಿಂದ ಕಿಡಿಕಿಡಿಯಾಗಿ ಬೆವತು ನುಡಿದ ಶಲ್ಯನಿಗೆ ದುರ್ಯೋಧನ ತುನವೊಲಿಸುವ ಬಗೆಯಲ್ಲಿ ವ್ಯಕ್ತವಾಗುವ ಸಂವಾದದ ಮಾತುಗಳು ಮೇಲಿನ ವಿಚಾರಕ್ಕಿಂತ ಭಿನ್ನವಾದವುಗಳೇನಲ್ಲ.

---

೧. ಕುಲವೆಂಬುದುಂಟೆ ಬೀರಮೆ
ಕುಲಮಲ್ಲದೆ ಕುಲಮನಿಂತು ಪಿಕ್ಕದಿರಿಂ ನೀ
ಮೊಲಿದಲ್ಲಿ ಪುಟ್ಟಿ ಬೆಳೆದಿರೊ
ಕುಲಮಿದುರ್ದೆ ಕೊಡದೊಳಂ ಶರಸ್ತಂಬದೊಳಂ (ಪಂಪ ಭಾರತ 2-83)

ಕುಲಹೀನನೆ ಅಪ್ಪೊಡೆ ಕೇ
ವಲ ಬೋಧಂ ಪರಶುರಾಮನೇನೀಗುಮೆ ನಿ
ರ್ಮಲಿನ ಕುಲಂಗಲ್ಲದೆ ಪಿಡಿ
ಮಲಲ್ಲದಂತಪ್ಪ ದಿವ್ಯ ಬಾಣಾವಳಿಯಂ – (ಪಂ. ಭಾ. 12-97)
ಮಣಿಮಂಡಲಮುಂ ಕವಚಂ
ಮಣಿಯದ ಚಾರಿತ್ರಮುಗ್ರ ತೇಜಮುಮೀಯೊ
ಳ್ಗುಣಮುಂ ಕಲಿತನಮುಮಿವೇಂ
ಪ್ರಣತಾರೀ ಸೂತ ಸೂತನೊಳೊಡವುಟ್ಟುಗುಮೇ (ಪಂ. ಭಾ. 12-98)

ಮನಃಶಾಸ್ತ್ರೀಯ ನೆಲೆಯಲ್ಲಿ ರೂಪಗೊಂಡ ಇಲ್ಲಿಯ ರಾಜನೀತಿ ಮತ್ತು ಸಂಭಾಷಣೆಯ ಶೈಲಿ ತಕ್ಷಣವೇ ಗಮನ ಸೆಳೆಯುವಂತಹದು. "ಕುಲಹೀನನ ಅಪ್ಪೊಡೆ" ಎಂದು ಮಾತನ್ನಾರಂಭಿಸುವ ದುರ್ಯೋಧನ, ಕರ್ಣನಲ್ಲಿಯ ಒಳ್ಳೆಯ ಗುಣಗಳೆಲ್ಲ ಪಟ್ಟಿಮಾಡಿ ಶಲ್ಯನಿಗೆ ಹೇಳುತ್ತ ಹೋಗುತ್ತಾನೆ. ಅನಂತರ ಪ್ರಣತಾರೀ ಸೂತ ಸೂತನೊಳ್ ಎಂ ಒಡವುಟ್ಟುಗುಮೇ (ವಿಧೇಯದಿಂದ, ಶತ್ರುಗಳನ್ನುಳ್ಳ ಶಲ್ಯನೇ ಸೂತಪುತ್ರ ಕರ್ಣನಲ್ಲಿ ಈ ಗುಣಗಳೆಲ್ಲ ಜೊತೆಯಲ್ಲಿಯೇ ಹುಟ್ಟುತ್ತವೆಯೇನು?) ಎಂದು ಪ್ರಶ್ನಿಸುತ್ತಾನೆ. ದುರ್ಯೋಧನ, ಕರ್ಣನ ಹುಟ್ಟಿನ ಗುಟ್ಟನ್ನು ಬಲ್ಲವನಾಗಿದ್ದಾನೆ ಎನ್ನುವುದು ನಮ್ಮ ಒಡಲಲ್ಲಿಟ್ಟುಕೊಂಡಾಗಲೂ ದುರ್ಯೋಧನ ಇಲ್ಲಿಯೂ ಕುಲವನ್ನು ಮೊದಲ ಪ್ರಸಂಗದಲ್ಲಿಯಂತೆ ಒಪ್ಪಿಕೊಳ್ಳುವುದಲ್ಲದೇ, ಕರ್ಣ ಹೀನಕುಲದವನಲ್ಲ ಅವನು ಮೇಲುಕುಲದವನೆಂದು ವಾದಿಸುತ್ತಾನೆಯೇ ವಿನಃ ಜಾತಿ ವ್ಯವಸ್ಥೆಯನ್ನು ಅಲ್ಲಗಳೆಯುತ್ತಿಲ್ಲ. ದುರ್ಯೋಧನನ ಈ ಎರಡೂ ಪ್ರಸಂಗಗಳ ಮೇಲಿಂದ ಈತ ಜಾತಿ ವ್ಯವಸ್ಥೆಯನ್ನು ನಂಬುತ್ತಾನೆ ಎನ್ನುವುದು ಸ್ಪಷ್ಟವಾಗುತ್ತದೆ. ಇದು ರಾಜಕೀಯ ತತ್ವದಿಂದ ಕೂಡಿದ್ದು ಎನ್ನುವುದು ಸ್ಪಷ್ಟ. ಕರ್ಣನನ್ನು ಕುಲಜನನ್ನಾಗಿಸಿದ ದುರ್ಯೋಧನನೇ, ಜೂಜಿಗೆ ಹೋದಾಗ ಇಬ್ಬರಿಗೂ ಸಮಾನ ಗೌರವವನ್ನು ಸತ್ಯಂತಪರಲ್ಲಿ ತೋರಿದ – ಆಸನಂ ನೀಮಿವೇಕೆ ದಯೆಗೆಯ್ದುರೊಮೀಂಗುಲಿಗಂಗೆ ಪಂ.ಭಾ. (9-67) ಎಂದು ಹೇಳುವ ಮಾತೇ ದುರ್ಯೋಧನನ ಮೂಲ ಗುಣವನ್ನು ಬಿಚ್ಚಿಡುತ್ತದೆ. ಹೀಗಾಗಿ ದುರ್ಯೋಧನ ಕರ್ಣನಿಗೆ ಅಂಗ ರಾಜ್ಯದ ಪಟ್ಟಾಭಿಷೇಕ ಮಾಡುವ ಮುನ್ನ ಹೇಳಿದ – "ಕುಲಮೆಂಬುದುಂಟೆ ಬೀರಮೆ ಕುಲಮಲ್ಲದೆ ಕುಲಮನಿಂತು ಪಿಕ್ಕದರಿಂ" ಎಂದು ಹೇಳಿದ— ಪ್ರಗತಿಪರವಾದ ಕುಲದ ವಿಚಾರ, ವಿಚಾರವಾಗಿ ಮೂಡಿ ಬರದೆ ಅದು ಪ್ರಾಸಂಗಿಕವಾಗಿ ಬರಿ ಒಣ ಮಾತಾಗಿ ಮೂಡಿಬಂದಿದೆ.

ಇಲ್ಲಿ ಎದ್ದು ನಿಲ್ಲುವ ಪ್ರಶ್ನೆಗಳೆಂದರೆ ದುರ್ಯೋಧನನ ಪಾತ್ರದಿಂದ ಮೂಡಿ ಬಂದ ಇಲ್ಲಿಯ ವಿಚಾರಗಳು ಪಂಪನ ವಿಚಾರಗಳೆಂದು ಪರಿಗಣಿಸಬೇಕೆ?

ಅಥವಾ ದುರ್ಯೋಧನನ ಮೂಲಕ ಹಾಗು ಶಲ್ಯನ ಮೂಲಕ ಸಮಾಜದ ಬೇರೆ ಬೇರೆ ಮುಖಗಳನ್ನು ಮುಂದಿಡುತ್ತಿದ್ದಾನೆ ಎನ್ನಬೇಕೆ? ಇಂಥ ಈ ಪ್ರಶ್ನೆಗಳನ್ನು ಮುಂದಿಟ್ಟುಕೊಂಡು ಮುಂದಿನ ಹಂತದಲ್ಲಿ ಚರ್ಚಿಸಬಹುದೆನಿಸುತ್ತದೆ. ಆದ್ದರಿಂದ ಈಗ ಇನ್ನೊಂದು ಸಂದರ್ಭದ ಕುರಿತು ಚರ್ಚಿಗೆತ್ತಿಕೊಳ್ಳಬಹುದಾಗಿದೆ.

ಪಂಪ ಭಾರತವಲ್ಲಿದ್ದ, ಪಂಪನ ಕುರಿತು ತುಂಬ ಪ್ರಸಂಸೆಗೆ ಪಾತ್ರವಾದ ಕೆಲವೇ ಸಂದರ್ಭಗಳಲ್ಲಿ ಭೀಷ್ಮರಿಗೆ ವೀರಪಟ್ಟ ಕಟ್ಟುವ ಸಂದರ್ಭವೂ ಒಂದು. ಕರ್ಣನ ಪ್ರಾಮಾಣಿಕ ಸ್ನೇಹ, ರಾಜನೀತಿಯ ತರ್ಕ, ಯುದ್ಧನೀತಿಯ ಪ್ರತಿಪಾದನೆ, ಸ್ವಾಭಿಮಾನದ ಕಂಪನ, ಸಂಯಮದ ಅತಿರೇಕ, ಸಾಮಾಜಿಕ ವ್ಯವಸ್ಥೆಯ ವಿಚಾರಗಳ ನಿರಾಕರಣೆ, ಇಂಥ ಎಲ್ಲ ವಿಚಾರಗಳನ್ನು ಈ ಒಂದು ಸಂವಾದದಲ್ಲಿ ಪಂಪ ತುಂಬ ಪರಿಣಾಮಕಾರಿಯಾಗಿ ಕರ್ಣನ ವ್ಯಕ್ತಿತ್ವದಿಂದ ಹೊರಹಾಕಿದ್ದಾನೆ.

ಕುಲಜರನುದ್ಧತರಂ ಭುಜ
ಬಲಯುತರಂ ಹಿತರನೀ ಸಭಾ ಮಧ್ಯದೊಳ
ಗ್ಗಲಿಸಿದ ಮಾದಿಂ ನಾಲಗೆ
ಕುಲಮಂ ತುಬ್ಬುವವೊಲುಅದೆ ನೀಂ ಕಿಡೆ ನುಡಿವೈ (10-20)

ವ॥ ಎಂದು ನುಡಿದ ಗುರುವಿನ ಕರ್ಣಕಠೋರ
ವಚನಂಗಳ್ಗೆ ಕರ್ಣಂ ಕನಿಸಿ–

ಕುಲಮನೆ ಮುನ್ನ ಮುಗ್ಗಡಿಪಿರೇಂ ಗಳ ನಿಮ್ಮ ಕುಲಗಳಾಂತು ಮಾ
ರ್ಮಲೆತವನಟ್ಟಿ ತಿಂಬುವೆ ಕುಲಂ ಕುಲಮಲ್ತು ಚಲಂ ಕುಲಂ ಗುಣಂ
ಕುಲಮಭಿಮಾನಮೊಂದೆ ಕುಲಮಣ್ಮು ಕುಲಂ ಬಗೆವಾಗಳೀ
ಕಲಹದೊಳಣ್ಣ ನಿಮ್ಮ ಕುಲಮಾಕುಲಮಂ ನಿಮಗುಂಟುಮಾಡುಗುಂ
(10-21)

ಉಲ್ಲೇಖಿತ ಸಂದರ್ಭದಲ್ಲಿ ಈ ಎರಡೂ ಪದ್ಯಗಳು ತುಂಬ ಮಹತ್ವದೆನಿಸುತ್ತವೆ. "ಜಾತಿಗಳಲ್ಲೆಲ್ಲ ಉತ್ತಮದ ಬ್ರಾಹ್ಮಣ ಜಾತಿ" ಎಂದು ಹೇಳಬಹುದಾದ ವರೇ, ಹೇಳಿರಬಹುದಾದ "ನಾಲಿಗೆ ಕುಲವನ್ನು ಹೇಳುತ್ತದೆ. ಎನ್ನುವ ಗಾದೆ ಮಾತಿನಂತೆ ದ್ರೋಣ ಕರ್ಣನನ್ನು ಛೇಡಿಸುತ್ತಾನೆ. ಹೀಗೆ ಕರ್ಣನ ನಾಲಿಗೆಯ ಮೇಲಿಂದ ಕುಲವನ್ನು ಹೇಳುವ ದ್ರೋಣ ಅಪ್ರತ್ಯಕ್ಷನಾಗಿ ತನ್ನ ನಾಲಿಗೆಯಲ್ಲಿಯೇ ತನ್ನ ಕುಲದಲ್ಲಿಯ ಹೀನಗುಣವನ್ನೂ ತೋರಿಸಿಕೊಟ್ಟಿದ್ದಾರೆ. ಆದರೆ ಇದು ಪ್ರತ್ಯಕ್ಷವಾಗಿ ಗೋಚರವಾಗದೇ ಅಪ್ರತ್ಯಕ್ಷವಾಗಿ ಗೋಚರವಾಗುತ್ತದೆ. (ಇದು ಹೀಗೂ ಅರ್ಥೈಸಲು ಸಾಧ್ಯವೆಂದು ದ್ರೋಣನೂ ಚಿಂತಿಸಿರಲಿಕ್ಕಿಲ್ಲ!) ಯುದ್ಧ ಮತ್ತು ರಾಜನೀತಿಯ ನಡುವೆ ಜಾತಿಯ ಚರ್ಚೆ ಅನವಶ್ಯಕವಾದರೂ ದ್ರೋಣ (ಪಂಪ–?) ಅದನ್ನು ಎಳೆದು ತರುತ್ತಾನೆ.

ಇದಕ್ಕೆ ಪ್ರತಿಯಾಗಿ ಬರುವ ಕರ್ಣನ ಮಾತಿನ ಬಾಣ ದ್ರೋಣನ ಮಾತಿಗಿಂತಲೂ ಕಠೋರವಾಗಿಯೇ ವ್ಯಕ್ತವಾಗಿವೆ. ದ್ರೋಣ ಕರ್ಣನನ್ನು ವ್ಯಕ್ತಿಗತವಾಗಿ ಕುಲದ ಬಗ್ಗೆ ನಿಂದಿಸಿದರೆ, ದ್ರೋಣ ಭೀಷ್ಮರನ್ನು ಒಳಗೊಂಡಂತೆ ಇಡೀ ಬ್ರಾಹ್ಮಣ ಕುಲವನ್ನೇ ಕರ್ಣ ತಳ್ಳಿ ಹಾಕುತ್ತಾನೆ. ಅನಂತರದಲ್ಲಿ ಪ್ರತಿಜ್ಞೆಯನ್ನು ಮಾಡಿ ತನ್ನ ಪ್ರತಿಷ್ಠೆಯನ್ನು ತೋರಿದವರೂ, ಅದರ ಆಘಾದಪರಿಣಾಮ ಎದುರಿಸಬೇಕಾದವನು ದುರ್ಯೋಧನ!

ಎರಡೂ ಪಾತ್ರಗಳ ಒಳಹೊಕ್ಕು ಪಂಪ ಇಲ್ಲಿ ಮಾತನಾಡಿದ್ದಾನೆ, ಜಾತಿಯನ್ನು ಆವೇಶದಿಂದ ಪ್ರತಿಭಟಿಸಿದ್ದಾನೆ ಎನ್ನುವ ವಿಚಾರವನ್ನು ವಿಮರ್ಶಕರು ಈಗಾಗಲೇ ಹೇಳಿದ್ದಾರೆ. ಸಾಕಷ್ಟು ಪ್ರಶಂಸೆಯನ್ನೂ ಮಾಡಿದ್ದಾರೆ.[1] ಇದರೊಂದಿಗೆ ಪಂಪನ ಸಹಾನುಭೂತಿಪರವಾದ ಜೈನದೃಷ್ಟಿ ಕರ್ಣನ ವಿಲಕ್ಷಣವಾದ ವ್ಯಕ್ತಿತ್ವವನ್ನು ಬೆಳಕಿಗೆ ತಂದಿದೆ ಎಂದು ವಿವರಿಸಿದ್ದಾರೆ. ಆದರೆ ಇಲ್ಲಿ ಸಹಾನುಭೂತಿಪರವಾದ ದೃಷ್ಟಿಕೋನಕ್ಕಿಂತ ಪಂಪನ ವೈಯಕ್ತಿಕ ಎಂದರೆ, ಬ್ರಾಹ್ಮಣನಾಗಿದ್ದು ಪೂರ್ವಾಶ್ರಮದ ಮೇಲಿರುವ ಅಭಿಮಾನದ ಗೀಳು, ಜೈನನಾಗಿ ಬದುಕುತ್ತಿದ್ದ ಅನುಭವದ ಪಾಡು. ಇವೆರಡರ ನಡುವೆ ಇದ್ದ ಪಂಪನ ವ್ಯಕ್ತಿತ್ವವೇ ಈ ರೀತಿಯ ಅಭಿವ್ಯಕ್ತಿಗಾಗಲಿ, ಕರ್ಣನ ಪಾತ್ರ ಚಿತ್ರಣಕ್ಕಾಗಲಿ ಕಾರಣವಾಗಿದೆ ಎಂದು ನಿಸ್ಸಂಕೋಚವಾಗಿ ಹೇಳಬಹುದು.

ಕರ್ಣ ಮತ್ತು ದ್ರೋಣರ ಪ್ರಸಂಗಕ್ಕೆ ಸಂಬಂಧಿಸಿದ ಮೇಲಿನ ಪದ್ಯಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಮೇಲೆ ಚರ್ಚಿಸಲಾದ ವಿಷಯವಲ್ಲದೆ, ಬಗೆದು ತೆಗೆದರೆ ಇನ್ನೂ ಕೆಲವು ವಿವರಗಳು ದೊರೆಯುತ್ತವೆ. ದ್ರೋಣನ ನಾಲಿಗೆಯೂ ಕುಲವನ್ನು ಹೇಳುವಂತಹದ್ದಕ್ಕೆ ಉದಾಹರಣೆಯಾಗುತ್ತದೆ. ಪಂಪ ಕರ್ಣನ ಬಾಯಿಯಿಂದ ಏಕವಚನದಿಂದಲೇ ಮಾತನಾಡಿಸಿ (10–17) ಅನಂತರ ಕ್ರಮೇಣವಾಗಿ ಬಂಧುತ್ವದ ನೆಲೆಯಿಂದ (ಅಣ್ಣ) (10–21) ಬಹುವಚನಕ್ಕೆ ತಿರುಗಿಸುತ್ತಾನೆ? ಹಾಗೆಯೇ ಕರ್ಣನಿಗೆ ಸೇನಾನಿಯ ಪಟ್ಟವನ್ನು ಕಟ್ಟಿದಾಗ ಭೀಷ್ಮರಿಗೆ ತೋರಿಸುವ ಗೌರವ ಮತ್ತು ವಿಧೇಯತೆಯ ಗುಣವನ್ನು ಪ್ರಕಟಪಡಿಸುವ ಮೂಲಕ ಕರ್ಣನ ಬಹುಮುಖ ವ್ಯಕ್ತಿತ್ವಕ್ಕೆ ಧಾರೆ ಎರೆದಿದ್ದಾನೆ. (–ಮುಂದುವರೆದಿದೆ)

---

1. ವಿವರಕ್ಕಾಗಿ ನೋಡಿ :
   ಅ) ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ–ಸಂ.-2: ಪು.–62
   ಬ) ಕನ್ನಡ ಸಾಹಿತ್ಯ ಚರಿತ್ರೆ– ಸಂ. 3 : ಪು–480
   ಕ) ನಾಡೋಜ ಪಂಪ : ಮುಳಿಯ ತಿಮ್ಮಪ್ಪಯ್ಯ ; 386 418
   ಡ) ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ– ಸಿ. ವೀರಣ್ಣ : 151. 181

ಸ್ವಂತ ದುಡಿಮೆಯಿಂದ ಬಂದ ದುಡಿಮೆಯಲ್ಲಿ ಏನೆಲ್ಲವನ್ನೂ ಸಮಾಜದ ಹಿತಕ್ಕಾಗಿ ಸವೆಸಿದವರು. ಇಡೀ ಸಮಾಜವೇ ಅವರಿಗೆ ಮನೆಯಾಗಿತ್ತು. ಜನ ಸಮೂಹವೇ ಅವರಿಗೆ ಕುಟುಂಬವಾಗಿತ್ತು.

ಅವರ ಉದ್ಯೋಗವೆಂದರೆ ಬಟ್ಟೆ ವ್ಯಾಪಾರ, ಬಟ್ಟೆ ವ್ಯಾಪಾರಕ್ಕಾಗಿ ಊರಿಂದೂರಿಗೆ ಸಂತೆ ನಡೆಯುವ ಸ್ಥಳಕ್ಕೆ ಅವರ ಪ್ರಯಾಣ. ಅಲ್ಲಿ ಅವರ ಬಿಡಾರ. ವ್ಯಾಪಾರ. ಆ ವ್ಯಾಪಾರದಲ್ಲೂ ದಾಸೋಹಭಾವ, ರೂಪಾಯಿಗೆ ಒಂದಾಣೆಯಂತೆ ಲಾಭದ ನೇಮವನ್ನಿಟ್ಟುಕೊಂಡು ವ್ಯಾಪಾರ ಮಾಡಿದಾತ "ಯಪ್ಪಾ ನಮ್ಮ ಲಗ್ನ ನಿಂತಿದೆ, ಸೀರೆಬೇಕು ದುಡ್ಡಿಲ್ಲ" ಎಂದು ಯಾರು ಕೇಳಿದರೂ ಇಲ್ಲವೆನ್ನುತ್ತಿರಲಿಲ್ಲ. ಹೋಗೆಯೋ ಅವರು ಕೊಟ್ಟುದಕ್ಕೆ ಲೆಕ್ಕವಿಲ್ಲ.

ಮಾಡಿದೆನೆಂಬುದು ಮನದಲ್ಲಿ ಹೊಳೆದರೆ
ಏಡಿಸಿ ಕಾಡಿತ್ತು ಶಿವನ ಡಂಗುರ

ಎಷ್ಟೋ ವೇಳೆ ಯಾರಿಗೆ ಏನು ಸಹಾಯ ಮಾಡಿದ್ದರೂ ಇನ್ನೊಬ್ಬರ ತೊಂದರೆಯಲ್ಲಿ ಭಾಗಿಯಾದರೂ ಅವರ ಸಂಕಷ್ಟ ನಿವಾರಣೆ ಮಾಡಿದ್ದರೂ ಅಪ್ಪಿ-ತಪ್ಪಿ ಯಾರ ಮುಂದೆಯೂ ಆಡುತ್ತಿರಲಿಲ್ಲ. ತಮ್ಮಲ್ಲಿದ್ದುದನ್ನು ಕೊಟ್ಟು ಬರಿಗೈಲಿ ಮನೆಗೆ ಹಿಂತಿರುಗಿದ ಸಂದರ್ಭಗಳೂ ಉಂಟು, ಚರಬಸವ ತಾತನವರು ಪಾರಮಾರ್ಥಿಕದೆಡೆ ಒಲಿದವರು ಅವರ ದಾರಿ ಸರಿ. ಅವರ ಒಡ ಹುಟ್ಟಿದ ಅಣ್ಣ-ತಮ್ಮಂದಿರಿಗೆ ಈ ತೆರನಾದ ಮಾರ್ಗ ಸರಿ ಬರಲಿಲ್ಲ. ಕೊನೆಗೊಂದು ದಿನ ನಮ್ಮ ಪಾಲನ್ನು ನಮಗೆ ಕೊಡಿ ಎಂದು ಅಣ್ಣ ಚರಬಸವನಿಗೆ ಕೇಳಿದಾಗ ಸರಿ ಎಂದರು. ಪಾಲನ್ನು ಕೊಡಲಿಲ್ಲ, ಇಡೀ ಆಸ್ತಿಯನ್ನೇ ಅಣ್ಣ-ತಮ್ಮಂದಿರಿಗೆ ಬಿಟ್ಟು ಹುಟ್ಟಿದ ನೆಲ, ಮೆಟ್ಟಿದ ಭೂಮಿಯನ್ನು ತೊರೆದು ಅನವಾರ ಗ್ರಾಮದ ಬಂಧನವನ್ನು ಕಳಚಿಕೊಂಡು ಶಹಾಪುರಕ್ಕೆ ಬಂದು ತಮ್ಮ ಜೀವನವನ್ನು ಆರಂಭಿಸಿದರು.

ತಮ್ಮ ಉಪಜೀವನಕ್ಕೆ ಹೇಗೂ ಬಟ್ಟೆ ವ್ಯಾಪಾರವಂತೂ ಇತ್ತು, ಜೊತೆಗೆ ಶಿವನ ನಾಮ ಸ್ಮರಣೆ. ಅರಳಗುಂಡಿಗೆಯ ಶರಣಬಸವನ ದಾಸೋಹ ಪ್ರಭಾವ ಇವರ ಮನಸ್ಸಿನ ಮೇಲೆ ಆಗಿರಬೇಕು ಎನಿಸುತ್ತದೆ. ಇಬ್ಬರದೂ ಒಂದೇ ತೆರನಾದ ಜೀವನ ಶರಣಬಸವ ಅರಳಗುಂಡಿಗೆ ಬಿಟ್ಟು ಕಲ್ಬುರ್ಗಿಗೆ ಬಂದು ನೆಲೆಗೊಂಡಂತೆ. ಚರಬಸವನು ಅನವಾರ ಗ್ರಾಮವನ್ನು ಬಿಟ್ಟು ಶಹಾಪುರಕ್ಕೆ ಬಂದು ನೆಲೆ ನಿಲ್ಲುತ್ತಾರೆ. ನೆಲೆ ನಿಂತರು ಎಂದರೆ ತಮ್ಮ ದೈನಂದಿನ ಜೀವನಕ್ಕೆ ಬೇಡಿ ಕಾಡಿ ತಂದು ಬದುಕಲಿಲ್ಲ. ಕಾಯಕದ ಮುಖಾಂತರ ಜೀವನ ಮಾಡಿದರು. ಕಾಯಕ ಮಾಡಿ ದಾಸೋಹ ಮಾಡಿದರು. ಅವರು ವ್ಯಾಪಾರಕ್ಕಾಗಿ ಊರೂರು ಅಲೆಯುತ್ತಿದ್ದುದರಿಂದ ಅವರನ್ನು ಚರಬಸವ ಎಂದು ಕರೆದರು.

ಕುದುರೆಯ ಮೇಲೆ ಪಸಾರ ಹೇರಿಕೊಂಡು ಅವರು ವ್ಯಾಪಾರಕ್ಕಾಗಿ

ಹೋಗುತ್ತಿದ್ದರು. ವ್ಯಾಪಾರ ಮುಗಿಸಿ ಬರುವ ಕಾಲಕ್ಕೆ ಸಂತೆಯಲ್ಲಿ ಸಿಕ್ಕ ಕಾಳು-ಕಡಿಗಳನ್ನು ಊರಿಗೆ ತೆಗೆದುಕೊಂಡು ಬರುವಾಗ ದಾರಿಯಲ್ಲಿ ಯಾರಾದರೂ ಬಂದು "ಯಪ್ಪಾ ನಮಗೆ ತೊಂದರೆಯಿದೆ ಕೊಡಿ" ಎಂದು ಯಾಚಿಸಿದರೆ ಯೋಚಿಸದೆ ಕೊಟ್ಟು ಬರಿಗೈಲಿ ಮನೆಗೆ ಬಂದ ಮಹಾನುಭಾವ.

ಇಂದಿಗೆಂತು ನಾಳಿಗೆಂತು
ಎಂದು ಚಿಂತಿಸಲೇಕೆ
ತಂದಿಕ್ಕುವ ಶಿವಂಗೆ
ಬಡತನವುಂಟೆ

ಎಂಬ ನುಡಿಯಂತೆ ಅವರು ಸಂಗ್ರಹಿಸಿ ಇಡಲಿಲ್ಲ. ಬಂದುದನ್ನು ಬಡಜನರ ಒಡಲಿಗೆ ಅರ್ಪಿಸಿ ಕೃತಾರ್ಥರಾದರು.

ಇದೇನು ಸಾವಿರಾರು ವರ್ಷಗಳ ಹಿಂದಿನ ಕಥೆಯಲ್ಲ, ಕೇವಲ ತೊಂಭತ್ತು ವರ್ಷಗಳ ಹಿಂದೆ ಶಹಾಪುರದಲ್ಲಿ ಜರುಗಿದ ಸತ್ಯ ಸಂಗತಿ. ಅವರನ್ನು ನೋಡಿದವರು ಇಂದಿಗೂ ಸಿಗುತ್ತಾರೆ. ಅವರು ಮಾತುಗಾರರಲ್ಲ ಮಾತಿಗಿಂತ ಮೌನವೇ ಹೆಚ್ಚು. ಶರಣರ ನುಡಿಗಳನ್ನು ಚರಿತ್ರೆಗಳನ್ನು ಕೇಳುವುದು ಅವರಿಗೆ ಆನಂದ ತರುವ ವಿಷಯವಾಗಿತ್ತು. ಶರಣಬಸವನ ಪುರಾಣವನ್ನು ಎಷ್ಟೋ ಸಾರೆ ಹಚ್ಚಿಸಿದ್ದಾರೆ. ಸುಮಾರು ಆರು ತಿಂಗಳುಗಳ ಕಾಲ ಶರಣಬಸವನ ಪುರಾಣವನ್ನು ಶಹಾಪುರದ ತಮ್ಮ ಪಂಚಕಂತಿ ಮಠದಲ್ಲಿ ನಡೆಯಿಸಿದರು ಎಂದು ಹೇಳುತ್ತಾರೆ. ಅದೊಂದು ದಾಖಲೆಯೇ ಸರಿ. ಸೃಜನಶೀಲ ಮನಸ್ಸುಳ್ಳ ಚರಬಸವ ಸಾಹಿತ್ಯದ ಸೌಗಂಧವನ್ನು ತನಗರಿಯದಂತೆ ಜನಮನವನ್ನು ಅರಳಿಸಲು ಮಾಡಿದ ಕಾರ್ಯ ಅದಾಗಿತ್ತು.

ಶರಣರ ಸೂಳ್ನುಡಿಗಳೊಂದರಗಳಿಗೆ
ಇತ್ತಡೆ ನಿಮ್ಮನಿತ್ತೆ ಕಾಣಾ ರಾಮನಾಥಾ

ಎನ್ನುವ ವಚನಕಾರ ದೇವರ ದಾಸಿಮಯ್ಯನಂತೆ ಶರಣರ ಸಂಗ, ಶರಣರ ಮಾತು, ಶರಣಾಮೃತ ಕೇಳುವುದು ಅವರ ದೈನಂದಿನ ಕಾರ್ಯವಾಗಿತ್ತು. ಅವರು ಯಾರ ಮನೆಯಲ್ಲಿ ಹೋಗಲಿ ಎಂದೂ ಪ್ರಕ್ಷಿಪ್ತ ಪ್ರಸಾದ ಸೇವಿಸಿದವರಲ್ಲ, ಹಗ್ಗ ಕಣ್ಣಿಯನ್ನಾದರೂ ಹೊಸೆದು ಅವರ ಋಣವನ್ನು ಮುಟ್ಟಿಸಿದ ಕಾಯಕಯೋಗಿ.

ಅನ್ನದೊಳಗೊಂದುಗಳ
ಸೀರೆಯೊಳಗೊಂದೆಳೆಯ
ಇಂದಿಂಗೆ ನಾಳಿಂಗೆ ಬೇಕೆಂದನಾದೊಡೆ
ಅಣೆ ನಿಮ್ಮಾಣೆ ಕೂಡಲ ಸಂಗಮದೇವಾ

ಎಂಬ ಬಸವಣ್ಣನವರ ವಚನಕ್ಕೆ ಅರ್ಥ ಪೂರ್ಣವಾಗಿ ಬದುಕು ನಡೆಸಿದರು. ಚರಬಸವ ತಾತನವರು ಅವರ ಜೀವನವನ್ನು ಮೆಚ್ಚಿ ಅವರ ಮಾಣಿಯನ್

ಕೇಳಲು ಜನ ಬಹು ದೂರ ದೂರದಿಂದ ಬರುತ್ತಿದ್ದರು. ಆದರೆ ಅವರು ಯಾರಿಗೂ ಬೋಧಿಸಲಿಲ್ಲ. ತಿಳಿಸಿ ಹೇಳಲಿಲ್ಲ. ಕಾರಣ ಅವರ ಬದುಕೆ ತೆರೆದ ಪುಸ್ತಕವಾಗಿತ್ತು. ಅವರ ನಡೆಯೇ ಶಿವಮಂತ್ರವಾಗಿತ್ತು. ಬೋಧಿಸುವವರಿಗಿಂತಲೂ ದೊಡ್ಡವರಾಗಿದ್ದರು. "ನುಡಿದಂತೆ ನಡೆ ಇದೇ ಜನ್ಮ ಕಡೆ" ಎಂಬ ಮಾತಿದ್ದರೂ ಅವರು ನುಡಿಯಲಿಲ್ಲ, ನಡೆದು ತೋರಿದರು ಇದು ಅವರ ವ್ಯಕ್ತಿತ್ವ ಇದು ಅವರ ಜೀವನ.

ಇಲ್ಲಿ ಅವರ ಜೀವನದ ತುಂಬಾ ಪವಾಡಗಳೇ ತುಂಬಿಕೊಂಡಿವೆ, ಪುರಾಣದ ಪೆಂಡಾಲಿಗೆ ಬೆಂಕಿ ಬಿದ್ದಾಗ ನಂದಿಸುವುದು, ತುಪ್ಪ ಕಡಿಮೆ ಬಿದ್ದಾಗ ನೀರನ್ನೇ ತುಪ್ಪವಾಗಿಸುವುದು, ಸಜ್ಜಕದ ಬಂಡೆಗಳ ಮೇಲೆ ಕೆಂಜುಗಗಳಾದಾಗ ಇಲ್ಲದಂತೆ ಮಾಡುವುದು, ಬಾಳೆಕಾಯಿಗಳನ್ನು ಹಣ್ಣಾಗಿಸುವುದು, ಬಾವಿಯಲ್ಲಿ ನೀರು ಕಡಿಮೆ ಇದ್ದಾಗ ನೀರು ತರಿಸುವುದು, ತಾಬಂಡಿಗಳು ಕಡಿಮೆ ಬಿದ್ದಾಗ ಇರುವಂತೆ ಮಾಡಿರುವುದು ಇವೆಲ್ಲಾ ಪುರಾಣಕ್ಕೆ ಸೀಮಿತವಾದ ಸಂಗತಿಗಳು. ವೈಜ್ಞಾನಿಕ ವಿಚಾರಕ್ಕೆ ನಿಲುಕದ ಸಂಗತಿಗಳು. ಈ ಪವಾಡದ ಸಂಗತಿಗಳಿಗಿಂತ ಅವರು ಬದುಕಿದ್ದು ಪರಿಶುದ್ಧವಾದ ಬದುಕು. ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸಿ ಸದುವಿನಯವನ್ನೇ ತಮ್ಮ ನಡೆಯಾಗಿಸಿ ಈ ಭಾಗದ ಜನ ಜೀವನಕ್ಕೆ ಹೊಸ ತಿರುವನ್ನು ತಂದುಕೊಟ್ಟದ್ದು ಸಣ್ಣ ಪವಾಡವೇನಲ್ಲ. ವೈಜ್ಞಾನಿಕ ತಾಕಲಾಟದ ಈ ಇಪ್ಪತ್ತನೆಯ ಶತಮಾನದಲ್ಲೂ ಹನ್ನೆರಡನೆಯ ಶತಮಾನದ ಶರಣ ಬಾಳನ್ನು ಬೆಳಗಿದ್ದು ಸಣ್ಣ ಮಾತೇನಲ್ಲ. ಶರಣ ದಾರಿ ಸುಲಭವಾದುದಲ್ಲ.

ಚರಬಸವ ತಾತನವರ ದಿವ್ಯ ಜೀವನಕ್ಕೆ ಅವರ ಸತಿ ಸೂಗಮ್ಮ ಅನುರೂಪಳಾದ ಸತಿ. ಪತಿಯ ಕಾರ್ಯದಲ್ಲೂ ಹೆಗಲಿಗೆ ಹೆಗಲು ಕೊಟ್ಟು ದುಡಿದ ಸಾಧ್ವಿ ಲೋಕದ ಹೆಂಡಿರಂತೆ ಅದು ಬೇಕು. ಇದು ಬೇಕು ಎಂದು ಕಾಡಿದವಳಲ್ಲ. ಬೇಡಿದವಳಲ್ಲ. ಚರಬಸವನ ದಾಸೋಹದ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟವಳು, ಅವರ ಉಳಿಕೆ ಗಳಿಕೆಗಳೆಲ್ಲ ದಾಸೋಹವೇ ಆಗಿದ್ದವು. ಎಂದ ಮೇಲೆ ಇಡುವುದೇನು ಬಂತು. ಚರಬಸವನು ಬೆಳಕಿನ ಬತ್ತಿಯಾದರೆ ಸತಿ ಸೂಗಮ್ಮಳು ಎಣ್ಣೆಯಾಗಿ ಬೆಳಕಿಗೆ ಬಾಳು ನೀಡಿದ್ದಾಳೆ. "ಸತಿ ಪತಿಗಳೊಂದಾದ ಭಕ್ತಿ ಹಿತವಾಗಿದುಪ್ಪು ಶಿವಂಗೆ" ಎನ್ನುವಂತೆ ಅವರ ಬಾಳಾಗಿತ್ತು. ಬದುಕಾಗಿತ್ತು.

ಶರಣರು ಮೆಟ್ಟಿದ ಧರೆ ಪಾವನ
ಶರಣರು ಇದ್ದ ಪುರವೇ ಕೈಲಾಸ
ಶರಣರು ನಿಂದುದೇ ನಿಜ ನಿವಾಸ

ಎನ್ನುವಂತೆ ಶಹಾಪುರದಲ್ಲಿ ಅವರ ಸಮಾಧಿ ಸ್ಥಾನ ಇಂದು ಚರಬಸವೇಶ್ವರ ಗದ್ದುಗೆ ಎಂದು ಕರೆಸಿಕೊಳ್ಳುತ್ತಿವೆ. ದೂರ ದೂರದಿಂದ ಬಂದ ಭಕ್ತಾದಿಗಳು ತಮ್ಮ ಮಂಗಳ ಕಾರ್ಯಗಳನ್ನು ಇಲ್ಲಿ ನೆರವೇರಿಸಿಕೊಳ್ಳುತ್ತಿದ್ದಾರೆ. ಶಾಲಿವಾಹನ ಶಕೆ ೧೮೮೮ಳ

ರಲ್ಲಿ ತಮ್ಮ ಬಾಳಿಗೆ ಮಂಗಳ ಹಾಡಿದ ಚರಬಸವನ ಭೌತಿಕ ದೇಹವನ್ನು ನಾಗರ ಕೆರೆಯ ಮುಂಭಾಗದಲ್ಲಿ ಸಮಾಧಿ ಸ್ಥಾಪನ ಗೊಳಿಸಲಾಗಿದೆ. ಪ್ರತಿವರ್ಷ ಫಾಲ್ಗುಣ ಅಮವಾಸ್ಯೆಯಿಂದು ಪ್ರಾರಂಭವಾಗಿ ಚೈತ್ರ ಶುದ್ಧ ದಶಮಿಯವರಗೆ ಜಾತ್ರಾ ಮಹೋತ್ಸವ ಜರುಗುತ್ತದೆ.

ಇಂದಿಗೂ ಕೂಡ ಅವರ ಶರಣ ಸಂತಾನ ಚರಬಸವನ ಹಾದಿಯಲ್ಲಿ ನಡೆಯುತ್ತಿದೆ. ಮಠದ ಉತ್ತರಾಧಿಕಾರಿಯಾದ ಮಹಾಲಿಂಗಯ್ಯನವರು ಇಂದಿಗೂ ದಾಸೋಹ ನಡೆಸುತ್ತಿದ್ದಾರೆ. ಕಲ್ಯಾಣದ ಹೆಬ್ಬಾಗಿಲು ಕಲ್ಬುರ್ಗಿಯಾದರೆ, ಕಲ್ಬುರ್ಗಿಯ ಹೆಬ್ಬಾಗಿಲು ಶಹಾಪುರವಾಗಿದೆ. ಶ್ರಾವಣ ಮಾಸದಲ್ಲಿ ಭಜನಾ ಮೇಳಗಳು ಪಾದಯಾತ್ರೆಗೆ ಕಲ್ಬುರ್ಗಿಗೆ ಹೊರಟಾಗ ತಂಗುವುದು ಶಹಾಪುರದ ಚರಬಸವನ ಗದ್ದುಗೆಯಲ್ಲಿ. ರಾತ್ರಿ ಎಷ್ಟು ಹೊತ್ತಿಗೆ ಬಂದರೂ, ಎಷ್ಟು ಜನ ಬಂದರೂ ಅವರಿಗೆ ಪ್ರಸಾದ ಲಭ್ಯವಿರುತ್ತದೆ. ಅವರ ಸಂತಾನದ ನಡೆ-ನುಡಿ ಇಂದಿಗೂ ಪಾವನ. ಅವರ ಮಾತುಗಳನ್ನು ಕೇಳುವುದೊಂದು ಆಪ್ಯಾಯಮಾನ. ಯಾರ ಮನಸ್ಸಿಗೂ ನೋವಾಗುವಂಥ ಮಾತಾಡುವುದಿಲ್ಲ. ಅಂಥ ಪ್ರಸಂಗ ಬಂದರೆ ಮೌನವಾಗಿ ಬಿಡುತ್ತಾರೆ. ಯಾರಿಗೂ ಮಠದ ಉನ್ನತಿಗಾಗಿ ಯಾಚಿಸುವುದಿಲ್ಲ. ಬಾಯಿ ಬಿಟ್ಟು ಬೇಡಿದವರಲ್ಲ. ಕೈವೊಡ್ಡಿ ಕೇಳಿದವರಲ್ಲ.

ಬೇಡುವಾತ ಜಂಗಮನಲ್ಲ
ಬೇಡಿಸಿಕೊಳ್ಳುವಾತ ಭಕ್ತನಲ್ಲ

ಎನ್ನುವ ವಚನಕಾರರ ಮಾತಿನಂತೆ ಆ ಕೆಲಸವನ್ನು ಇಲ್ಲಿಯ ಭಕ್ತ ಜನ ತಾವಾಗಿಯೇ ಮಾಡುತ್ತಿದ್ದಾರೆ. ಅಂತೆಯೇ ಬದುಕು ಸಾಗಿದೆ. ಶರಣರು ಹೇಗಿದ್ದರೊ ಗೊತ್ತಿಲ್ಲ. ಮಹಾಲಿಂಗಯ್ಯ ಸ್ವಾಮಿಗಳನ್ನು ಹಾಗೂ ಅವರ ಮಕ್ಕಳನ್ನು, ಅವರ ನಡೆ-ನುಡಿಯನ್ನು ನೋಡಿದರೆ ಶರಣತನವೇ ಮೈವೆತ್ತು ಬಂದವರಂತೆ ಇಂದು ನಮ್ಮ ನಡುವೆ ಬದುಕುತ್ತಿದ್ದಾರೆ ಎಂದರೆ ಆಶ್ಚರ್ಯಗಳಲ್ಲಿ ಆಶ್ಚರ್ಯ ಎಂದರೆ ತಪ್ಪಿಲ್ಲ. ಆ ನಡೆ-ನುಡಿ ಇನ್ನೊಬ್ಬರಿಗೆ ಆದರ್ಶವಾಗಿದೆ. ಆ ನಡೆಯಲ್ಲಿ ನಾವು ಮುಂದಡಿಯಿಡುವುದೇ ನಮ್ಮ ಬಾಳಿನ ಗುರಿಯಾಗಬೇಕಿಲ್ಲವೆ?

---

## ಪರಿಸರ ಮಾಲಿನ್ಯ

ಪರಿಸರ ತುಂಬ ಕೆಟ್ಟಿದೆ ಸ್ವಾಮಿ
ಬಸ್ಸೇರಿ ಬೆವರೊರೆಸಿಕೊಳ್ಳುತ್ತ ಇವಳು ಮರಳಿ ನೋಡಿದಳು
ಒಂದೆಡೆ ಕಿಸಿ ಕಿಸಿ ಮತ್ತೊಂದೆಡೆ ಟಿಸಿ ಟಿಸಿ
ಇವೇನು ಮಂಗಗಳೇ ಅಲ್ಲ, ಅವರ ಪಳೆಯುಳಿಕೆಗಳು!

— **ರೈತಸುತ**

# ಬಾಪುಗೌಡ ಶಾಡಲಗೇರಿಯವರ

# ಹನಿಗವನಗಳು

– ೧ –

ಪ್ರೀತಿಗೆ
ಮೌನವೇ ಭಾಷೆ
ಅದಕ್ಕೆಂದೇ
ಆಕಾಶದ ಎದೆಯಲ್ಲಿ
ಭೂಮಿ ಏನೊಂದು ಬರೆಯಲಾಗದೆ
ಕೇವಲ ಪೂರ್ಣ ವಿರಾಮಗಳನ್ನಿಟದ್ದು.

– ೨ –

‘ಇದು ಸಾರ್ವಜನಿಕರ ವನ
ಗಲೀಜು ಮಾಡಬೇಡಿ’
ಎಂಬ ಸೂಚನಾ ಫಲಕ ನೋಡಿ
ನಾನು ಕಾಮಿಸುವುದನ್ನು ಬಿಟ್ಟು
ಪ್ರೇಮಿಸ ತೊಡಗಿದೆ.

– ೩ –

ಶ್ರೀಮಂತರ ಮಹಲುಗಳಲ್ಲಿ
ಕ್ಯಾನ್ಸರ ಬಿ. ಪಿ.....ಗಳು
ಕೇಕೆ ಹಾಕಿ ಕುಣಿಯುವಾಗ
ಕೂಲಿಗಳು, ಹುಣ್ಣಿಮೆಯ ರಾತ್ರಿಯಲ್ಲಿ
ಗುಡಿಸಿಲಿನಲಿ ಗೆಣತಿಯೊಂದಿಗೆ
ಕುರಿತೋದದೆಯೆ
ಕಾವ್ಯ ಪ್ರಯೋಗದಲ್ಲಿದ್ದರು.

– ೪ –

ಸಾವಿರ ಹನಿ
ನೆಲ ನುಂಗಿತು ವ್ಯರ್ಥ
ನಿನಗಿತ್ತ ಒಂದು ಹನಿ
ಘನವಾಯ್ತು ಅರ್ಥ

– ೫ –

ಪೆನ್ನಿದೆ
ಮಸಿಯಿದೆ
ಹಾಳೆಯಿದೆ
ಭಾವಗಳು ಸ್ಮಶಾನದಲ್ಲಿ ಮಲಗಿವೆ
ನೀನು ಹೋಗಿ ಕರೆದರೆ ಬಾರನೆ!

# ಒಣ ಮರದ ಹಾಡು

ಒಣಗಿ ಬರಡಾದ ಮರಗಳು ಇಂದು ನಾವು
ಗೊತ್ತಿದೆಯೆ ನಿಮಗೆ ನಮ್ಮ ಒಡಲಾಳದ ನೋವು ?

ಹಸಿರುಟ್ಟು ನಲಿವಾಗ ಮೈಯ ತುಂಬ
ಹಾಡಿದಿರಿ ಗಿಳಿ ಕೋಗಿಲೆಗಳೆ ಇಲ್ಲಿ ಕೂತು
ಹೂ ಮುಡಿದು ನಗುವಾಗ ತಲೆಯ ತುಂಬ
ಕಾಡಿದಿರಿ ದುಂಬಿ ಪತಂಗಗಳೆ ಪ್ರೀತಿ ಹೂತು

ಬಂದವರು ಹಣ್ಣಿಗಾಗಿ ನಿಂದವರು ನೆರಳಿಗಾಗಿ ಎಷ್ಟೋ ಮಂದಿ
ಇದ್ದಾಗ ಬಂದವರು ಬಿದ್ದಾಗ ಹೋದಿರೆಲ್ಲಿ?
ನೊಂದಿರುವೆವು ನಾವೀಗ ಬೆಂದಿರುವೆವು ಕಾಲನ–
ಋತು ಚಕ್ರದಲ್ಲಿ

ನೆನಪಿರಲಿ ಬರುವಿರೆಲ್ಲ ಮತ್ತೊಮ್ಮೆ ಇಲ್ಲಿ
ಮತ್ತೆ ಬಂದಾಗ ವಸಂತ ನಮ್ಮ ಬಾಳಿಗೆ
ಕೊನೆ ಬಂದಾಗ ಒಂದು ದಿನ ನಮ್ಮ ಗೋಳಿಗೆ.

— **ನಾ. ರಾ. ರುದ್ರಾಚಾರ**

---

## ಪೆದ್ದ

ಮೊಸರು
ಬಯಸಿದವನೊಬ್ಬ
ಪೆದ್ದ,
ಕೈ ಕೆಸರಾದರೆ
ಬಾಯಿ ಮೊಸರೆಂಬ
ಗಾದೆ ಕೇಳಿ
ಕೆಸರಲ್ಲಿ ಕೈ ಇಡಲು ಹೋಗಿ
ಕಾಲ್ಜಾರಿ ಬಿದ್ದ !

## ಕಾಮನೆ

ಗೆಳತಿ
ಇಲ್ಯಾವ ಬಾಡಿಗೆ ಮನೆ
ಸರಿಯಾಗಿಲ್ಲ
ನನ್ನ ಮನದಲ್ಲಿಯೇ
ಮನೆ ಮಾಡಬಹುದಲ್ಲ
ಇಗೋ
ಕಾಮನ
ನನ್ನದು!

— **ಕಾವ್ಯ ರಸಪ್ರೀಯ ಹೆಮನೂರ**

# ಅಯೋಧ್ಯ

ಕೇಳಿರಬೇಕಲ್ಲ ನೀವು ಅಯೋಧ್ಯದ ಹೆಸರು,
ಸಿಡಿಸಿದೆ ದೇಶದ ತುಂಬೆಲ್ಲ ಜಾತಿಯ ಕೆಸರು
ಬೆರೆಸಿದೆ ಭಾರತಿಯರಲ್ಲಿ ವಿಷದ ಮೊಸರು,
ಹಿಡಿದಿದೆ ಮೂರ್ಖತನದ ಕೊನೆಯ ಉಸಿರು.

ಅಳಿಸಬೇಕು ಮಂದಿರ ಮಸೀದಿ ಎಂಬ ಭೇಧಭಾವ
ಉಳಿಸಬೇಕು ದೇಶವೆ ದೇವ ಮಂದಿರ ಎಂಬ ಸ್ವಭಾವ,
ಬೆಳಸಬೇಕು ದೇವನೊಬ್ಬ ನಾವು ಹಲವು ಎಂಬ ಆತ್ಮಾನುಭಾವ
ಮೂಡಿಸಬೇಕು ನಮ್ಮಲ್ಲಿ ಭಾರತೀಯರು ನಾವೆಲ್ಲ ಒಂದೇ ಎಂಬ
ಮನೋಭಾವ.

ಹಿಂದು ಮುಸ್ಲಿಂ ಎಲ್ಲರಿಗೂ ಒಂದೇ ಈ ಪವಿತ್ರ ಮಣ್ಣು,
ಯಾರೆ ಸಾಯಲಿ ತನ್ನ ಮಡಿಲಿಗೆ ಕರೆಯುವುದು ಈ ಮಣ್ಣು,
ಏಕೆ ಧರ್ಮದ ಹೆಸರಿನಲ್ಲಿ ನಮ್ಮಲ್ಲಿ ಜಾತಿಯ ಹುಣ್ಣು,
ಜಾತಿ ಇರುವವು ಎರಡು ಒಂದು ಗಂಡು ಒಂದು ಹೆಣ್ಣು.

ಇಂದು ಎಲ್ಲರೂ ಮೂರ್ಖತನದಿಂದ ಅನುಭವಿಸಿದೇವು ದು:ಖ,
ಎಲ್ಲರೂ ಕೂಡಿ ಬಾಳಿದರೆ ಸಿಗುವದು ಸ್ವರ್ಗ ಸುಖ,
ಒಮ್ಮೆಯಾದರೂ ನೋಡೋಣ ಜಪಾನ ಅಮೇರಿಕಗಳ ಮುಖ,
ಅವರಂತಹ ಕಾರ್ಯ ಸಾಧನೆಗಳನ್ನು ಮಾಡೋಣ ಇನ್ನೂ ಅನೇಕ

— ರಾಜಶೇಖರ ಎಸ್. ಮೊಂಗೆ

---

## ಆಡಳಿತ

ಭ್ರಷ್ಟಾಚಾರದ ಸಿದಿಗಿಯಲ್ಲಿ
ಮೌಲ್ಯದ ಹೆಣ
ಶ್ವೇತಧಾರಿಗಳ ಹೆಗಲ ಮೇಲೆ
ರಾಜಮಾರ್ಗದಲ್ಲಿ ಸಾಗಿದೆ.

— ಪ್ರೊ|| ಶಿವಕುಮಾರ ಕಲ್ಲೂರ

—ಎ. ಕೃಷ್ಣ

## ‘ಅರ್ಥ’ ಮಾಡಿಕೊ ಸ್ವಾಮಿ ! ಅರ್ಥ ಮಾಡಿಕೊ

ರಾಟೆ ನೂಲುವ ಕೈಗೆ, ನೂತದ್ದೇ ನೂತೂs ನೂತು ರಾಟೆ ಸ್ವಾಮಿ!
"ಗಾಂಧಿ" ಎಂದಾಗ ಪಾಪ! ಕರ್ಣದೋಷವೋ ಏನೋ
ಎಲ್ಲರಿಗೂ "ಬ್ರಾಂದಿ" ಎಂದೇ ಕೇಳಿಸುತ್ತದೆ.
ಹೆಸರಿನ ಹಸಿರು ಕಂಡಲೆಲ್ಲಾ ಸ್ವಾರ್ಥದ ನವಿಲು ನಾಲಗೆ
ತಾನೇ ತಾನಾಗಿ ಚಾಚುವುದೇ ಚಟವಾಗಿದೆ.
ಬರೀ ಬಸಿರಿನ ಬೋಗೋಣಿ ತುಂಬುವುದೇ ಹಟವಾಗಿದೆ.

ಸಭೆಯಿರಲಿ ಸಮ್ಮೇಳನವಿರಲಿ ವೇದಿಕೆಯ ಉನ್ನತಾಸನಗಳ ಮೇಲೆ
"ನನ್ನನ್ನೇ" ನಾನು ಹುಡುಕಾಡುತ್ತೇನೆ
ತಕ್ಕಷ್ಟು ಗಿಟ್ಟಿದೆಯೊ ಇಲ್ಲವೊ ಎಂದು ಭ್ರಮಿಸಿ,
"ಬಂಗಾರದ ಗುಬ್ಬಿ"ಯನ್ನು ಕಂಡು ಆಸೆಗಣ್ಣುಗಳನ್ನರಳಿಸಿ,
ದಿಟ್ಟ ಬಾಣಗಳನ್ನು ಬಿಟ್ಟ ಮಹತ್ವಾಕಾಂಕ್ಷಿ ಔರಂಗಜೇಬನಂತೆ,
ನನ್ನ ನವರಂಗ ಜೇಬುಗಳನ್ನೆಲ್ಲಾ ತಡಕಾಡುತ್ತೇನೆ ಸ್ವಾಮಿ! ತಡಕಾಡುತ್ತೇನೆ.
ನಿಮ್ಮಂತೆಯೇ ನಾನಲ್ಲವೆ? ಕಿಂಚಿತ್ ಕೊರತೆಯಾದರೂ ಮಿಡುಕಾಡುತ್ತೇನೆ
ಸ್ವಾಮಿ ! ಮಿಡುಕಾಡುತ್ತೇನೆ.

ಕಾರಣ ಬೇಕೆ? ಈ ಎಲ್ಲಾ ಕಾರಣಗಳ ತೋರಣ
ನಿಮ್ಮೆಲ್ಲರ ಜೇಬಿನಲ್ಲೇ ಹೆಪ್ಪುಗಟ್ಟು! ಲೋ ಕಿಟ್ಟು, ಪುರುಷಾರ್ಥವೆಂದರೇನಯಾ
"ಅರ್ಥ"ವಿಲ್ಲದೆ ಪುರುಷನಿಗೇನಾದರೂ ಅರ್ಥವಿದೆಯೇ?

ಎಲ್ಲಿಯಾದರೂ ಇರು, ಏನಾದರೂ ಮಾಡು
ಅನರ್ಥೇಶ್ವರನ ಅವಕೃಪೆಗೆ ಪಕ್ಕಾಗದ ಪರಿಯ ಅರ್ಥ ಮಾಡಿಕೊಂಡು
ಕೈತುಂಬ—ಮೈತುಂಬ "ಅರ್ಥ" ಮಾಡಿಕೊ ಸ್ವಾಮಿ ! ಸ್ವಲ್ಪ ಅರ್ಥಮಾಡಿಕೊ.

— ಪ್ರೊ. ವಸಂತ ಕುಷ್ಟಗಿ

# ಬದುಕಿ ನೀ ಕತೆಯ ಒಂದು ಪುಟ

ಸೂರು ಸೂರು ಕಷ್ಟ ಕಲ್ಪಗಳ
ವಿರುದ್ಧ ಪ್ರವಾಹದಲ್ಲಿ
ಹುಟ್ಟಿನಿಂದಲೇ ನಾನು
ಈಜು ಬಿದ್ದವನು.
ಈ ಜನ್ಮದಲ್ಲಂತೂ
ಅರಿತು ಮಾಡಿದ ತಪ್ಪು ಅರಿವಿನಲ್ಲಿಲ್ಲ।

ಅರಿತಾಗ ಕಣ್ಣೀರಿಟ್ಟು
ಹೃದಯ ನೈರ್ಮಲ್ಯದಲ್ಲಿ
ಕಣ್ಣು ಬಿಟ್ಟವನು ।
ಎಳೆತನದಲ್ಲಿ
ವಿಧಿ ವಿಲಸನದ ಪರಿಯು
ಬಲಗಾಲ ಮುರಿದು
ಎಡಗಾಲ ಗತಿಯು ನಿತ್ರಾಗ
ಊರುಗೋಲಿನಾಶ್ರಯದಿ
ಒಗ್ಗಾಲಿಯಾಗಿ ಬೀಳುತ್ತ ಎದ್ದಾಗ
ಕುಂಟುತ್ತಾ ಸಾಗಿದರೂ
ಸೋಲ ಸರಿಸಿ
ಕಾಲೆರಡರ ಜನಕೆ
ಮೂರು ಕಾಲಾಗಿ
ವಸಂತವ ತುಂಬಿ
ಅಳು ನುಂಗಿ ನಕ್ಕ ನಾನು
ಸದಾಶಿವನು!
ಕುಂಟಿರಲಿ ಕುರುಡಿರಲಿ
ಅನಾಥವಾಗಿರಲಿ ಈ ಬದುಕು!

ಅಲ್ಲಿಲ್ಲದಯೊಯ ಬಿತ್ತಿ
ಅದರ ಮೂಲದ ಕಥೆಯ
ಹೇಳುವೆ ಶರಣರು ಸಂತರು

ಇನ್ನೂ ಅಗ್ರವಾಗಿದ್ದರೂ
ಅವರಲ್ಲಿ ಕಾಲಿದ್ದನೇಕರು
ಪುಣ್ಯಗಳ ಕೇರಿ
ಅವಿನಾಶಿ ಪಾಪಿನಿಗಳಾಗಿ
"ಅಶ್ವತ್ಥಾಮ: ಹತ: (ಕುಂಜರ:)"
ಎಂದು ಸಾರಿ
ಕೃಷ್ಣನಿಲ್ಲದೆ ನನ್ನನ್ನು
ಕೊಲ್ಲ ಬೇಕೆಂದವರು
"ತ್ರಿ" ಬಳಸಂಗಿ "ಧರ್ಮ" ಎಂದವರು
ಇನ್ನೂ ಬದುಕಿದ್ದಾರೆ!
ನಾನು ಬದುಕಿದ್ದೇನೆ.
ಎದ್ದಾತದ್ದ ಹುಟ್ಟಿದ ಕಾಣುವ
ಮನಸ್ಸಿನ ಮೋಹದ ತಾಕೆ
ನೀರಾಗಿ ನಾ
ನೆಲದಲ್ಲಿ ಹಾಯಾಗಿ ಹರಿದಾಗ
ಅವಿನಾಶಿ ಪಾಪಿನಿಗಳು
ಹೊಸ ಹೊಳೆಯಲ್ಲಿ
ಸ್ನೈ ಕೊಡಹಿ ಸತ್ಯ ಸಾಕ್ಷಿಗಳಾಗಿ
ಪಶ್ಚಾತ್ತಾಪ ಪಟ್ಟಿರಬೇಕು!
ಕಲ್ಲುಪ್ಪೊಟರೆಯ ಸರಿಸಿ
ಜೀವಾಳ ಕಂಡು ವಿಧಿ
ನಾಚಿರಬೇಕು!
ಕಾಲು ಕುಂಟಾದರೇನಂತೆ
ಬದುಕು ಕುಂಟೇ ಎಂದು
ಕಣ್ಣು ಕುರುಡಾದರೇನು
ಬಾಯಿ ಕುರುಡೇ ಎಂಬಂತೆ
ಬ್ರಹ್ಮ ರಾಜಿಯಾಗಿರಬೇಕು!
ರಾಜೀವ ನೇತ್ರ ಹಾಲುಗಡಲಾಗಿ
ಹಾಲಾಹಲವ ನುಂಗಿದವನಾಗಿ
ಬರಸೆಳೆದು ಮೆಚ್ಚಿ ಹಾಡಿರಬೇಕು
ಬದುಕಿನ
ಕತೆಯ ಒಂದು ಪುಟವ!

(ಗುಲಬರ್ಗಾ ವಿಶ್ವವಿದ್ಯಾಲಯವು ೧೯೮೨-೮೩ ರ ಸಾಲಿನಲ್ಲಿ ನಡೆಸಿದ ರಾಜ್ಯ ಮಟ್ಟದ ದಿ|| ಜಯತೀರ್ಥ ರಾಜ ಪುರೋಹಿತ ಸ್ಮಾರಕ ದತ್ತಿ ಸಣ್ಣ ಕಥಾ ಸ್ಪರ್ಧೆಯಲ್ಲಿ ಉತ್ತಮ ಕಥೆ ಎಂದು ಪ್ರಶಸ್ತಿ ಪಡೆದ ಕೃತಿ.)

# ಬಲಿ

— ಸಿದ್ಧರಾಮ ಹೊನ್ಕಲ್

"ಧರ್ಮದಳ್ಳಿ" ಅಂಬೋ ಧರ್ಮದಳ್ಳಿನೇ ಬರುವ ದೇವಿ ಉತ್ಸವಕ್ಕಾಗಿ ಸಿಂಗಾರಗೊಳ್ಳತೊಡಗಿತ್ತು. ಸುತ್ತ ಹದನಾರು ಹಳ್ಳ್ಯಾಗ ಧರ್ಮದಳ್ಳಿ ದೇವಿ ಉತ್ಸವದ್ದೇ ಸುದ್ದಿ. ಬೇವಿನಗಿಡದ ಕಟ್ಟಿ ಮ್ಯಾಗ ಕುಂತು ಹಾಳೂರಿನಿಂದ ಹಿಡ್ದು ಬೆಂಗಳೂರಿನತನಕದ ಹಾಳು ಹರಟಿ ಹೊಡೆಯುವ ಉಡಾಳ ಸಿದ್ಲಿಂಗನ ಗೆಳೆಯರ ಬಾಯಾಗಿಂದ ಹಿಡ್ದು ಕುಕ್ಕರಗಾಲಿನಲ್ಲಿ ಕುಂತು ತನ್ನ ಮೊಳಕಾಲ ಸಂದ್ಯಾಗ ತಲಿ ಬಿಗಿ ಹಿಡ್ದು ಮೊಂಡ ಕತ್ತಿಯಿಂದ ಕರಕರ ತಲೆ ಬೋಳಿಸುತ್ತಲೇ ಭವಿಷ್ಯ ವರ್ತಮಾನ-ಭೂತವನ್ನೆಲ್ಲಾ ಜಾಲಾಡಿ ತನ್ನದೇ ವ್ಯಾಖ್ಯಾನ ಕೊಡುವ ಹಜಾಮರ ಅಪ್ಪಣ್ಣನ ಬಾಯಾಗ್ಲೂ ಇಂದು ಅದೇ ಸುದ್ದಿ.

"ಭಾರತೆಂಬೋ ಈ ದೇಶಕ್ಕ ಸ್ವಾಸಂತ್ರ ಬರೋದಕಿಂತ ಮೊದ್ಲು ಧರ್ಮದಳ್ಳಿ ದೇವತಿ ಉತ್ಸವ ಆಗಿತ್ತು" ಅಂತ ಈಗ ಮುರ್ಕು ಹೊರಸಿನ ಮ್ಯಾಲ ಹರ್ಕು ಕೌದಿ ಹೊಚಿಗೆಂಡು ಕೆಮ್ಮು-ಧಮ್ಮಿಲೇ ನರಳುವ ಮುದುಕ ಮುತ್ತಜ್ಜ ಕ್ಯಾಕರಿಸಿ ಕಫ ಉಗುಳಿ ದೊಡ್ಡ ಕಥಿ ಮಾಡಿ ಹೇಳ್ತಿರ್ತಾನ, ಯಾರಾದರೂ ಕುಂತು ಕೇಳೋರು ಸಿಕ್ಕರ.

"ನಮ್ಮ ಧರ್ಮದಳ್ಳಿ ದೇವಿ ಉತ್ಸವ ಮಾಡೋದ ಅಂದ್ರ ಸುಮ್ನೆ ಆಗ್ತದೇನ್ರಲಾ, ನನ್ನ ಈ ಪಾಪಿ ಕಣ್ಣಿಂದ ಒಂದೇ ಒಂದು ದಪ ನೋಡಿನಿ .ಆಗ ನಾನಿನ್ನೂ ಎಮ್ಮಿ ಕಾಯ್ಕೊಂಡು ಬರೋ ವಯಸ್ಸನವನು. ಅಜಮಾಸು ಮೂರು ಇಪ್ಪತ್ತು ವರ್ಷದ ಹಿಂದ ಇರ್ಬೇಕು. ಸುಖದ ಕಾಲ. ಸುತ್ತ ಹದನಾರು ಹಳ್ಳ್ಯಾಗ ದೇವಿ ಉತ್ಸವ ಮಾಡ್ತಿವಂದ್ರ ಸಾಕು, ಜ್ವಾಳ, ಗೋಧಿ, ಬೆಲ್ಲ ಹಿಂಗ ಒಟ್ಟ ಏನು ಬೇಕು ಅದೆಲ್ಲ ತಾನ ಬಂದು ಕೊಟ್ಟು ಹೋಗತಿದ್ರು ಜನ. ಊರಿಗೆ ಊರೇ ಹರಕಿ ಹೊತ್ಗೊಂಡೋರು ಕುರಿ-ಕೋಳಿ-ಕ್ವಾಣ ತಂದ ದೇವತಿಗೆ "ಬಲಿ" ಕೊಟ್ಟು ತಮ್ಮ ಹರಕಿ ಮುಟ್ಟಿಸಿ ಪುಣ್ಯ ಕಟ್ಗೆಂತಿದ್ರು, ಆ ವರ್ಷ ಪಟೇಲ್ರು ರಾಮಪ್ಪಗೌಡ, ಕುಲ್ಕರ್ಣಿ ಲಕ್ಷ್ಮಣರಾವ ಪೋಲೀಸಗೌಡಶಾನಿಮಲ್ಲಮ್ಮಗೌಡ್ತಿ ಹಿಂಗ ಒಟ್ಟು ಊರೆಲ್ಲ ಪ್ರಮುಖರು ಒಂದಾಗಿ ಇಚಾರ ಮಾಡಿ ದೇವತಿ ಉತ್ಸವ ಹೊರಡಿಸಿದ್ರು. ಈಗ ಅಂತಾದ್ದೆಲ್ಲಾ ಎಲ್ಲಿ ಬರ್ತಾದ. ಕಲಿಕಾಲ. ನಮ್ಮ ಕಣ್ಣು ಇನ್ನೇನು ನೋಡ-

ಗೌಡಗ ರಸಿಕತನ ಭಾಳ, ಹಿಂಗಾಗಿ ಎಲ್ಲರ ಕುದರಿಗಳು ರಾತ್ರಿ ಆದಕೂಡ್ಲೆ ಊರು ಕಡೆ ಬಂದ್ರ ಈ ಗೌಡನ ಕುದುರಿ ಸಮೀಪದ ಶಹರಕ್ಕ ಹೋಗ್ತಿತ್ತು. ಇಲ್ಲಾ ಊರ ಹೊರಗಿನ ತ್ವಾಟಕ್ಕರ ಹೋಗ್ತಿತ್ತು. ಮನ್ಯಾಗ ಹರ್‍ಯಾದ ಮೂರನೇ ಹೇಣ್ತಿ ಇದ್ದರೂ ಸಹ ಗೌಡಗ ನಿತ್ಯ ಹೊಸ ಹೊಸ ಹೊಕ್ಕಳ ಬದಲಿಸೋ ಚಪಲ. ಗೌಡನ ಮನಿ ಕಸ ಬಳಿಯುತ್ತಲೇ ಮುದುಕಿಯಾದ ಕೆಳಗೇರಿ ಯಲ್ಲವ್ವ ಎಲೆಗೆ ಸುಣ್ಣ ಹಚ್ಚಿ ತಂಬಾಕಿನೊಂದಿಗೆ ತಿನ್ನುತ್ತಲೇ ಕಿಸಕ್ಕನೇ ನಕ್ಕು ರಸ ಉಗುಳಿ ಗೌಡನ ಇಂತಹ ರಸಿಕತೆಯ ಕತೆಯನ್ನೆ ಪರಿಕತೆಯೇನೋ ಎನ್ನುವಂತೆ ತನ್ನ ಕೇರಿಯ ಹರ್‍ಯಾದ ಹುಡುಗ್ಯಾರ ಮುಂದೆ ಆಗಾಗ ಹೇಳುತ್ತಿರುತ್ತಾಳೆ.

● ●

ಯಾರು ಎದ್ದರೇನು-ಬಿಟ್ಟರೇನು ತನ್ನದಂತು ಬಿಡಲಾರದ ಕರ್ಮ ಎಂದು ನಿದ್ದೆಗಣ್ಣಿನಲ್ಲಿ ನಿತ್ಯದಂತೆ ಎದ್ದ ಸೂರ್‍ಯ ಧರ್ಮವಳ್ಳಿಯನ್ನು ಬೆಳಗಾಗಿಸಿದ. ಅರಮನೆಯಂತಹ ಮನೆಯ ಮೇಲಂತಸ್ತಿನ ಕಟ್ಟಾಂಜನದಲ್ಲಿ ಭಾರಿ ಮಂಚದ ಮೇಲೆ ಭೀಮಗೌಡನ ಗೊರಕೆಯನ್ನು ಸಹಿಸುತ್ತಲೇ ಮಲಗಿದ್ದ ರತ್ನಮ್ಮಗೌಡ್ತಿ ತನ್ನನ್ನು ಹೆಬ್ಬಾವಿನಂತೆ ಬಳಸಿಕೊಂಡಿದ್ದ ಕೈ ತೆಗೆದು ಹಾಕಿ ತೆಕ್ಕೆಯಿಂದ ಹೊರ ಬಂದವಳೇ ಬಿಚ್ಚಿದ್ದ ಮುಡಿ ಕಟ್ಟಿಕೊಂಡು ಒಂದು ಸಲ ಭೀಮಪ್ಪಗೌಡನನ್ನು ದಿಟ್ಟಿಸಿ ನಿಟ್ಟುಸಿರು ಬಿಟ್ಟು ಕೆಳಗಿಳಿದು ಬಂದಳು. ಬೆಳಕರಿಯುತ್ತಲೇ ಹತ್ತೆಂಟು ಆಳುಗಳಿಗೆ ಬುತ್ತಿ ಕಟ್ಟಿಸಲು ಅಡಿಗೆ ಮಾಡಿಸುವ ಉಸ್ತುವಾರಿ ಆಕೆಯದು. ಕೈಗೊಂದು ಕಾಲಿಗೊಂದು ಆಳುಗಳು ಇದ್ದು ಮನೆಯ ಕೆಲಸದಲ್ಲಿ 'ಗೌಡ್ತಿತನ' ಮಾತ್ರ ಆಕೆಯ ಸರಹದ್ದು.

"ಯವ್ವಾ ಅಪ್ಪಗೌಡ ಎದ್ದಾರೇನವ್ವ ಯವ್ವಾ" ತಳವಾರ ಭೀಮ್ಯಾನ ಧ್ವನಿ ಗೌಡತಿಯನ್ನು ಹೊಸ್ತಲಿಗೆ ಬರ ಮಾಡುತ್ತದೆ.

"ಇಲ್ಲಾ ಭೀಮ್ಯಾ ನಿಮ್ಮಪ್ಪ ಇನ್ನೂ ಎದ್ದಿಲ್ಲ, ಅದೇನ್ಲಾ ಇಷ್ಟು ನಸುಗಿನ್ಯಾಗ ಬಂದಿದಿ. ಅಂತಾ ಅರ್ಜಂಟ ಏನು ಐತಪ ಅಂತಾದ್ದು" ಗೌಡ್ತಿಯ ಪ್ರಶ್ನೆ.

"ಏನಿಲ್ಲಯವ್ವಾ ಗೌಡಶಾನಿ, ನಮ್ಮವ್ವ ದೇವಿದು ಉತ್ಸವ ಮಾಡೋದು ಸಮೀಪ ಬಂದಾದಲ್ಲರೀ ಯವ್ವಾ, ಅದಕ್ಕ ಯಾರ್‍ಯಾರಿಗೆ ಏನೇನು ಹೇಳಬೇಕು. ಯಾವ ಯಾವ ಊರಿಗೆ ಹೋಗಿ ಸುದ್ದಿ ಮುಟ್ಟಿಸಿಬರ್ಬೇಕು ಅಂತ ಅಪ್ಪಗೌಡ ಇವತ್ತು ಹೇಳ್ತಿನಿ ಮುಂಜಾನೆ ಬಾರ್ಲೆ ಅಂತ ನಿನ್ನೆನೇ ಹೇಳಿದ್ದರಿ. ಆದಕ್ಕ ಬಂದಿನ್ರಿ" ಎಂದು ಅಲ್ಲೆ ಹೊಸ್ತಿಲ ಕೆಳಗಿನ ನೆಲದ ಮೇಲೆ ಕುಕ್ಕರಗಾಲಿನ ಮೇಲೆ ಕುಳಿತ. ಒಳಗೆಹೋದ ಗೌಡಶಾನಿ ನಾಕ ರೊಟ್ಟಿ, ನಿನ್ನಿದು ಪಲ್ಲ್ಯಾ, ಉಳ್ಳಾಗಡ್ಡಿ, ಅಗಸಿ ಕಾರಾ ತಂದು ಹಾಕಿದ್ದನ್ನು ಬಗಲ ಶಲ್ಯದಲ್ಲಿ ಕಟ್ಟಿಕೊಂಡು ಎದ್ದು ಹೋಗಿ ಒಂದೆಡೆ ಇಟ್ಟು ದನಗಳಿಗೆ ಮೇವು ಹಾಕುವದು ಇತ್ಯಾದಿ ಸಣ್ಣ ಪುಟ್ಟ ಕೈ ಬಾಯಾಗಿನ ಕೆಲಸದಲ್ಲಿ ತೊಡಗಿಕೊಂಡನು ಭೀಮ್ಯಾ.

ಸೂರ್ಯ ಇನ್ನೂ ಸ್ವಲ್ಪ ಮ್ಯಾಕ ಬಂದು ಗೌಡರ ಪಡಸಾಲ್ಯಾಗ ಕಟ್ಟಿದ ಗಡಿಯಾರ ಢಣ ಢಣ ಎಂದು ಒಂಬತ್ತು ಸಲ ಬಾರಿಸುವದಕ್ಕೂ, ಸಮೀಪದ ಬಸವಣ್ಣನ ಗುಡಿಯಲ್ಲಿಯ ಗಂಟೆಯನ್ನು ಆವ್ಯಾರೋ ಭಕ್ತರು ಢಣ-ಢಣ ಎಂದು ಜೋರಾಗಿ ಕೈಲಾಸದಾಗಿನ ಪರಮಾತ್ಮನಿಗೇ ಕೇಳಿಸುವಂತೆ ಬಡಿಯ ತೊಡಗಿದಾಗ ಬೇಸರದಿಂದಲೇ ಎಚ್ಚರಗೊಂಡ ಭೀಮಪ್ಪಗೌಡ ಒಂದು ಸಣ್ಣ ಆಸೆ ಮರಿಯಂತೆ ಎದ್ದು ಶಿವ-ಶಿವಾ ಎಂದು ಛೀಟಿಟ್ಟು ಮೈ ಮುರ್ದು ದೋತರದ ಗಂಟು ಬಿಗಿ ಮಾಡಿಕೊಳುತ್ತ ಕೆಳಗಿಳಿದು ಬಂದ.

"ಅಡ್ಡ ಬಿದ್ದೀನ್ರಿ ಯಪ್ಪಾ" ನಡು ಬಗ್ಗಿಸಿ ನೆಲಕ್ಕ ಕೈ ಹಚ್ಚಿ ಹೇಳಿದ್ದ ತಳವಾರ ಭೀಮ್ಯಾನ ಸಲಾಮು ಸ್ವೀಕರಿಸಿದ ಪಟೇಲ ಭೀಮಪ್ಪಗೌಡ "ಯಾವಾಗ ಬಂದಿಲೇ ಭೀಮ್ಯಾ. ನಾ ಒಂದಿಟು ಹೊರಕಡಿ-ಜಳಕ ಮುಗಿಸಿಗೊಂಡು ಬರ್ತೀನಿ. ಅಷ್ಟರ ಒಳಗೆ ಕ್ವಾಣ ಕಡಿಯೋ ಚಾಜ ತನ್ನದೇ ಆದ ಅಂತ ಹಾರ್ಯಾಡತಾನಂತಲಾ ಅಂವಾ, ಆ ಹೊಸಮನಿ 'ತಿಮ್ಮ'ನ ಕರಕೊಂಡು ಬಾ ಹೋಗು" ಎಂದು ಹೇಳಿ ಭೀಮನನ್ನು ಆ ಕಡೆ ಅಟ್ಟಿ ಒಳ ಮನೆಗೆ ನಡೆದರು. ಗೌಡರ ಬಾಯಾಗ 'ತಿಮ್ಮ' ಅನ್ನೋ ಹೆಸರು ಬಂದ ತಕ್ಷಣಕ್ಕ ತಳವಾರ ಭೀಮ್ಯಾನ ಮುಖದಾಗ ಒಂದು ಸಣ್ಣ ಗೆರೆಯಷ್ಟು ನಗಿ ಸುಳಿದು ಹ್ವಾದದ್ದು ಗಮನಿಸಲಿಕ್ಕೆ ಅಲ್ಲಿ ಯಾರು ಇರ್ಲೆ ಇಲ್ಲ.

'ತಿಮ್ಮ'

ಗೌಡರ ಹೊಲದಾಗೆ ಹುಟ್ಟಿ ಹೊಲದಾಗೆ ಬೆವರು ಹರಿಸಿ ದುಡಿದು ಬೆಳೆದವ. ಹಿಂಗಾಗಿ ಅವ್ನ ಲಗ್ನದ ಖರ್ಚಿಗೆ ಭೀಮಪ್ಪಗೌಡ್ರು, ಸಾಲ ಬರ್ಕೊಳ್ಳಲಾರ್ದ ತಾವೇ ಖರ್ಚು ಮಾಡಿ ಲಗ್ನ ಮಾಡಿಸಿದ್ರು, ಹಿಂಗಾಗಿ ಭೀಮಪ್ಪಗೌಡ ಅಂದ್ರ ತನ್ನ ಪಾಲಿನ ದೇವ್ರು ಅಂತ ಅನ್ಕೊಂಡು ತಂಪಾನ ಹೊತ್ತಿನ್ಯಾಗ ನೆನಿತಿದ್ದ. ಆದ ಅದು ಭಾಳ ದಿನ ಉಳಿಲಿಲ್ಲ. ತಿಮ್ಮನ ಹೇಣ್ತಿ 'ಚಂದ್ರಿ' ಹೆಸರಿಗೆ ತಕ್ಕಂಗ ಚಂದ್ರನ ನಮ್ಮ ಕಾಟಗ ಜಾತ್ಯಾಗ ಇಂತಾ ಕೆಂಪನ ಹೆಣ್ಣು ಮಗಳು ಹೆಂಗ ಹುಟ್ಟಿದ್ಲೋ ಅಂತ ಸುತ್ತಿನ ನಾಕಳ್ಳಿಯನ ಕೇರಿ ಮಂದಿ ಇಚಾರ ಮಾಡಿ, ಕಡಿಗಿ ಚಂದ್ರಿ ಅಪ ಯಮನಪ್ಪ ಪ್ಯಾಟಿಗಿ ಕಟಿಗಿ ಮಾರಲಾಕ ಹ್ವಾದಾಗ ಯಾವನಾರ ಶೇಟ್ಜಿ ಜೊ ಮಲಗಿರಬೇಕು. ಅಂತ ಠರಾವು ಪಾಸ ಮಾಡಿ ಮುಕ್ತಾಯ ಹಾಡಿದ್ದರು. ಇಂತ ವಿವಾದಾತ್ಮಕ ಚೆಲುವಿನ ಚಂದ್ರಿಯ ಸಂದು ಗೊಂದುಗಳಲ್ಲಿ ಹರೇ ಉಕ್ಕೇರಿ ತುಳುಕುತ್ತಿತ್ತು. ನೋಡಿದೋರು ಮೈ ಮನದಾಗ "ದುಂಧುಮಿ" ಬಾರಿಸಿದಂಗಾಗೋ ಹೊತ್ತಿನ್ಯಾಗ ಇಂತಹ ಚಂದ್ರಿನ ನೋಡಿ ಭೀಮಪ್ಪಗೌಡನ ಆರೋಗೇನಿನ ಕುದು ನೆಟ್ಟಗ ಹೊಲಕ್ಕ ಬರಲಾಕ ಹತ್ತಿತ್ತು.

ಮೊದಮೊದಲು ತಿಮ್ಮಗ "ಗೌಡ್ರು ಹೊಲಕ್ಕ ಯಾಕ ಭಾಳ ಬರ್‍ಲಾಕತ್ಯಾರ ಅನ್ನೋದೆ ಬಗಿಹರಿಲಿಲ್ಲ. ಬಗೆಹರ್‍ದ ಮ್ಯಾಲ ಇನ್ನ ಇಲ್ಲಿ ಇರದು ಬ್ಯಾಡ. ಇಪ್ರ ತನ್ನ ಬಾಳುವೆ ಹಾಳಾಗೋದು ಗ್ಯಾರಂಟಿ ಅಂದ್ಕೊಂಡು ರಾತ್ರೋರಾತ್ರಿ ಊರು ಬಿಟ್ಟು ಹದನಾರು ಹರ್‍ದಾರಿ ದಾಟಿ ಬಂದ ಹಳ್ಳ್ಯಾಗ ಕೂಲಿ ಮಾಡಿ ಬದುಲಾಕ ಹತ್ತಿದ್ದ.

ತನ್ನ ಆಳು ಮನುಷ್ಯ ತನ್ನ ಧಿಕ್ಕರಿಸಿ ಬೇರೆ ಊರಾಗ ಬದುಕೋದು ಒಂದು ಸಿಟ್ಟಾದರ, ಚಂದ್ರಿ ದಕ್ಕಲಿಲ್ಲಲ ಅನ್ನೋದು ನೂರು ಸಿಟ್ಟಾಗಿ ಗೌಡಗ ತಿಮ್ಮನ ಮ್ಯಾಲ ಹಗೆ ಒಳಗೊಳಗೆ ಕುದಿತಿತ್ತು.

"ಧರ್ಮದಳ್ಳ್ಯಾಗ ದೇವತಿ ಮಾಡತಾರ...." ಅನ್ನೋ ಸುದ್ದಿ ಊರಿಂದೂರಿಗೆ ಹಬ್ಬಿ ತಿಮ್ಮ ಇದ್ದ ಊರಿಗೂ ಮುಟ್ಟಿತ್ತು. ತಮ್ಮ ಧರ್ಮದಳ್ಳ್ಯಾಗ ದೇವತಿ ಮಾಡತಾರ ಅಂದಾಕ್ಷಣಕ್ಕನ ತಿಮ್ಮನ ಧರ್ಮಪ್ರಜ್ಞೆ ಜಾಗೃತ ಆಗಿತ್ತು. ಹಿಂದಕಿನಿಂದ ದೇವತಿ ಮುಂದ "ಬಲಿ" ಕಡಿಯೋ ಚಾಜ ತಮ್ಮ ಮನಿತನದ್ದೇ ಆದ, ಎಂಬುದನ್ನು ತಲೆಯಿಂದ ತಲೆಗೆ ಹೊತ್ತು ತಂದಿದ್ದ ತಮ್ಮಪ್ಪನ ಮಾತು ನೆನಪಾಗಿ 'ತಿಮ್ಮ' ದೇವಿ ಉತ್ಸವ ಮುಗಿಯುವತನಕ ಊರ ಕಡೆ ಹೋಗಿ ಬಂದ್ರಾತು ಅಂತ ಹೇಣ್ತಿ ಚಂದ್ರಿನ ಕರಕೊಂಡು ಊರು ಬಿಟ್ಟ ಯಾಡ ವರ್ಷದ ಮ್ಯಾಲ ಊರಿಗೆ ಹಿಂತಿರುಗಿದ್ದ. ಈ ಸುದ್ದಿ ಗೌಡನಿಗೂ ಮುಟ್ಟಿ ಬಹಳ ದಿನದ ಆಸೆಕ್ಕ ರೆಕ್ಕೆ ಪುಕ್ಕ ಮೂಡಿದ್ದವು. ಹಾಗಾಗಿ ತಳವಾರ ಭೀಮ್ಯಾನ ಮೂಲಕ ಕರೆ ಕಳುಹಿಸಿದ್ದರು.

ಕೋಟೆ ಬಾಗಿಲಿನಂತಹ ಭಾರಿ ತಲೆ ಬಾಗಿಲಗುಂಟ ಇರುವ ದೊಡ್ಡ ಕಟ್ಟೆಯ ಮ್ಯಾಲ ಹಾಸಿದ ರತ್ನಗಂಬಳಿಯ ಮೇಲೆ ತಕ್ಕೆಗಾನಿಸಿಕೊಂಡು ಕುಳಿತ ಭೀಮಪ್ಪಗೌಡನ ಸುತ್ತಲು ಕೆಳಗಡೆ ಹತ್ತಾರು ರೈತರು ಪರ ಊರಿನವರು, ಗೌಡರ ಕೂಲಿಯಾಳುಗಳು ಕುಳಿತುಕೊಂಡಿದ್ದರು. ಗೌಡರು ಮೇಲಿನಿಂದ ಒಗೆದ ಸೌಸಂಬರ ಬೀಡಿಗಟ್ಟಾದಲ್ಲಿಯ ಬೀಡಿ ಸೇದುತ್ತ ಅವರ ಪ್ರತಿಯೊಂದು ಮಾತಿಗೂ ಗೋಣು ಹಾಕುತ್ತ ಕುಳಿತಿದ್ದರು. ಹೊತ್ತು ಮುಳುಗಿ ಹೊತ್ತು ಹೊಂಟರ ದೇವಿ ಉತ್ಸವ ಇತ್ತು. ಹಿಂಗಾಗಿ ಇಡೀ ಊರ ತುಂಬ ಬೀಗರು–ಬಿಜ್ಜರು ಬಂದು ಸೇರಿಕೊಂಡಿದ್ದರು. ದೂರ–ದೂರುಗಳಿಂದ ತಮ್ಮ ಬೀಗರನ್ನು ಕರೆಸಿಕೊಂಡಿದ್ದ ಹಳ್ಳಿಗರು ತಮ್ಮ ಊರಿನ ಗೌಡರ ಮನೆಯನ್ನು ಅಭಿಮಾನದಿಂದ ತೋರಿಸಲು ಕರ್‍ಕೊಂಬಂದು ಕುಂತಿದ್ದರು. ಅವರೆಲ್ಲಾ ತೆರೆದಬಾಯಿ ತೆರೆದ ಕಣ್ಣಿನಿಂದ ಗೌಡನ ಆಸ್ತಿ ವರ್ಚಸ್ಸನ್ನು ಕಂಡು "ಏನ್ ಭಾರಿ ಗೌಡನ್ರಿಯಪ್ಪಾ. ದೈವಾನ ದೋಗು" ಎಂದು ಬೆರಗಾಗಿ ಮಾತನಾಡುತ್ತ ಗೌಡನ ವರ್ಣನೆಯಲ್ಲಿ ತೊಡಗಿದ್ದರು.

"ಅಪ್ಪ ಬಿದ್ದೀನ್ರಿಯಪ್ಪಾ"... ಸ್ವಲ್ಪ ಆತಂಕದಿಂದಲೇ ಬಗ್ಗಿ ಸಲಾಮು ಮಾಡಿ ನಿಂತ ಅದೇ ಬಂದ ತಿಮ್ಮ.

"ಬಾರ್ಲೆ ತಿಮ್ಮ, ಹ್ಯಾಂಗ ಇದ್ದಿ, ಊರ್ನ ಮರ್ತು ಬಿಟ್ಟ್ಯಲೇ ಮಗನ, ಇಲ್ಲೇನು ಕಮ್ಮಿ ಆಗಿತ್ತಲೇ ನಿನಗ" ಗೌಡ್ರು ಹುಸಿಗೋಪ ಪ್ರಕಟಿಸಿದ್ದು ನೋಡಿ ತಿಮ್ಮಗ ಸ್ವಲ್ಪ ಧೈರ್ಯ ಬಂದು "ಏನಿಲ್ಲೆಪ್ಪ, ಹುಟ್ಟಿದೂರ ಹ್ಯಾಂಗ ಮರಿತೀನ್ರಿ, ಬಂದಿನೆಲ್ಲರಿ, ಅವ್ವನ ಜಾತ್ರಿ ಸಲುವಾಗಿ, ಆಕಿ ಎಲ್ಲಿದ್ರೂ ಕರಿಸಿಗೆಂತ್ಯಾಳ ನೋಡ್ರಿ, ನಮ್ಮವ್ವನದು ಭಾಳ ಸತ್ಯರಿ. ನಿಮ್ಮ ಕಾಲಕ್ಕ ಬಂತು ನೋಡ್ರಿ ಅವ್ವನ ಹೊಟ್ಟಿ ತುಂಬೋದು"

ತಿಮ್ಮನ ಹೊಗಳಿಕೆಯ ಮಾತು ಕೇಳಿ ಗೌಡ್ರಿಗೆ ಆಶ್ಚರ್ಯ. ತಿಮ್ಮನಿಗೋ ಎಲ್ಲಿ ತಾನ ಊರಾಗ ಇಲ್ಲೋ ಅನ್ನೋನೆಪ ಹೇಳಿ 'ಚಾಜಾ' ಕಸಗಂತಾರೋ ಈ ಗೌಡ್ರು ಎಂಬ ಭಯ ಅಳುಕು. ಅದಕ್ಕಾಗೆ ಇಷ್ಟೆಲ್ಲಾ ಪಂಪ ಹೊಡದಿದ್ದ.

"ಹೋಗ್ಲಿ ಬಿಡ್ಲೆ ತಿಮ್ಮ ಎಲ್ಲ್ಯಾರ ಇರು. ಆರಾಮ ಇದ್ದೆಲ್ಲಾ ಅಷ್ಟೆ ಸಾಕು ನಮಗ. ನೀ ಈ ಊರು ಮರ್ತು ಖೂನಗೇಡಿ ಆಗಿ ಹೋದ್ರು ನಾವು ನಿನ್ನ ಮರೀತಿಲೇನ್ಲಾ. ಅವ್ವಗ 'ಬಲಿ' ಕೊಡೋ ಚಾಜಾ ನಿಮ್ಮದೇ ಅದಲ್ಲ. ಅದ್ಕ ಕರೀಲಾಕ ಕಳಿಸಿದ್ನ್ಯ ನೋಡು" ಎಂದು ಭೀಮಪ್ಪಗೌಡರು ಮಾತು ಮುಗಿಸಿದಾಗ ತನ್ನ ದೈವ ಸಾರ್ಥಕವಾಯಿತು ಎಂಬಷ್ಟು ಖುಷಿಯಾದ ತಿಮ್ಮ "ಆಯ್ತ್ರಿಯಪ್ಪ ಗೌಡ, ನೀವು ಹೇಳಿದಂಗ ಆಗ್ಲಿರಿ. ನಾನು ಬಲಿ ಕೊಡಲಾಕನ ಬಂದೀನ್ರಿ" ಎಂದು ಅದಕ್ಕಾಗೇ ಬಯಸಿ ಬಂದಿದ್ದ ತಿಮ್ಮ ತಕ್ಷಣ ಒಪ್ಪಿಕೊಂಡು ಬಿಟ್ಟ.

ಕಿಸೆಯಿಂದ ನೂರರ ನೋಟೊಂದನ್ನು ತೆಗೆದು ತಿಮ್ಮನ ಮುಂದೆ ಬೀಳುವಂತೆ ಹಾಕಿ "ತಗೋ ತಿಮ್ಮ, ಎಷ್ಟಾರ ಆಗ್ಲಿ ನೀನು ನಮ್ಮ ಮನುಷ್ಯಾ ಇದಿ. ತಗೋ ಜಾತ್ರಿ ಮಾಡು ಹೋಗು. ಅವ್ವನ ಮುಂದ 'ಬಲಿ' ಕೊಡಲಾಕ ಬರು ಮುಂದ (ಸೆರೆ) ಮಣ್ಣ ಹಾಕಲಾಕ ಬೇಕಲ್ಲ. ಖುಷಿ ಮಾಡು ಹೋಗು" ಎಂದು ತಿಮ್ಮನಿಗೆ ಕಳಿಸಿಕೊಟ್ಟರು.

ಮರುದಿನವೇ ಉತ್ಸವ ಇರುವುದರಿಂದ ಗೌಡರಿಗೆ ಮೈ ತುಂಬ ಕೆಲಸ. ಊರಿನ ಜನ ಬಂದು ಕಂಡು ಏನೇನು ಮಾಡಬೇಕೆಂದು ಕೇಳಿ ಹೋಗುತ್ತಿದ್ದರು. ಅತ್ತ ಉತ್ಸವದ ತಯ್ಯಾರಿ ಭರ್ಜರಿಯಾಗಿ ನಡೆದಿತ್ತು, ರಾತ್ರಿ ಹೊತ್ತಿಗೆ ಎಲ್ಲಾ ಮುಗಿಸಿ ಎದ್ದು ಮನ್ಯಾಕ ಹೋಗು ಮುಂದ ಗೌಡ್ರು ತಳವಾರ ಭೀಮ್ಯಾನನ್ನು ಖಾಸಗಿಯಾಗಿ ಕರೆದು ಕೆಲವು ಖಾಸಾ ಮಾತು ಹೇಳಿ ಕಳಿಸಿದರು.

"ಜಡ್ಡ ನಕ್ಕ .... ನಕ್ಕ ದಿಕ್ಕ .... ಜಡ್ಡ ನಕ್ಕ ....ನಕ್ಕ ದಿಕ್ಕ" ಹಲಿಗೆಗಳ ಲಯಬದ್ಧ ಶಬ್ಧಕ್ಕೆ ಓಗೊಟ್ಟಂತೆ ಧರ್ಮದಳ್ಳಿಗೆ ಸುತ್ತಲಿನಿಂದ ದಾರಿಯಾಗಿ ಜನ ಬಂದು ಸೇರ ತೊಡಗಿದ್ದರು. ಸುತ್ತಲ ಹಳ್ಳಿಗಳಿಂದ ಜನ ದೇವಿ ಉತ್ಸವಕ್ಕೆ "ತಮ್ಮ ಊರಾಗಂತು ಮಾಡೋದಿಲ್ಲಾ. ಪುಣ್ಯಾತ್ಮರು ಇಲ್ಲಿ ಮಾಡ್ಲಕ ಹತ್ತ್ಯಾರ ನೋಡಿ ಪುಣ್ಯ ಕಟಿಗ್ಯಾಬೇಕೆಂದು" ಬರ ತೊಡಗಿದ್ದರಿಂದ ಧರ್ಮದಳ್ಳಿಯಲ್ಲಿ ಹುಳ ಹುಪ್ಪಡಿ-ಗಳಂತೆ ಜನವೋ ಜನ. ಮೊದಲೇ ಹೇಳಿ ಕೇಳಿ ದೇವಿ. ಕೆಂಪು ಸೀರಿ ಉಟಗೊಂಡು ಹಣೆ ತುಂಬ ಕುಂಕುಮ ಹಚ್ಚಿಗೆಂಡು ಹುಲಿಮ್ಯಾಲ ಕೈಯಾಗ 'ಶಿರ' ಇಡ್ಕೊಂಡು ಕುಂತಿರುವ ಗಂಭೀರ ಭೀಕರತೆಯನ್ನು ಸಣ್ಣ ಹುಡುಗ್ರು ಯಾರಾದ್ರು ನೋಡಿದರ ಚಿಟ್ಟನೆ ಚೀರಂಗ ಕಾಣ್ತಿದ್ದಳು. ಸುತ್ತ ನಾಕು ದೊಡ್ಡ ಪಣತ್ಯಾಗ ದೀವಿಗೆ ಕೆನ್ನಾಲಿಗೆ ಚಾಚಿ ಉರಿತಿದ್ದವು.

ದೇವಿ ಗುಡಿ ಮುಂದ ಕಾಯಿ ಒಡೆಯುವದು, ನೈವೇದ್ಯ ಹಿಡಿಯುವದು ಹಾಗು ಹರಕೆ ಮುಟ್ಟಿಸುವವರ ಗದ್ದಲವೋ ಗದ್ದಲ, ಆರತಿ ಹೋರೋರು, ದೀಡ-ನಮಸ್ಕಾರ ಹಾಕುತ್ತ ಬರುವವರು ಕಣ್ಣು ಹೊರಳಿಸಿದಲ್ಲೆಲ್ಲಾ ಕಾಣುತ್ತಿದ್ದರು. ಅವರಿಗೆಲ್ಲಾ ಸೊಳ್ಳ ಪೂಜಾರಿ ಹಣೆಯಲ್ಲಿ ಅಂಗಾರ ಹಚ್ಚಿ ಕಳ್ಳಿಸಿದ್ದ. ಕಾಯಿ ಒಡೆದು ಕೊಡಲು ನಾಲ್ಕಾರು ಹುಡುಗ್ರು ತೊಡಗಿದ್ದರು. ಜನಗಳ ಗದ್ದಲ ತಿಕ್ಕಾಟದಿಂದ ಸೊಳ್ಳ ಪೂಜಾರಿ ಮೈಗೆ ಗಾಳಿ ಹತ್ತಲಾರದಕ್ಕ ಬೆವರು ಕಿತ್ತಿ ಹೊಲಸು ನಾರಿಕೆಂತ ಇಳಿತಿತ್ತು. ಬಿಳೀ ಮಂದಿ ಹೋಳ್ಗಿ ನೈವೇದ್ಯ ಹಿಡಿತ್ತಿದ್ದರು. ಕಪ್ಪು ಮಂದಿ ಕೈಯಾಗ ಕೋಳಿ-ಕುರಿ ಇಡ್ಕಂಡು ತಿರುಗ್ಯಾಡಲಾಕ ಹತ್ತಿದ್ದರು.

ನಾಲ್ಕಾರು ಮಂದಿ ಗೌಡ್ರು ಆಳುಮಕ್ಳು ಭಾರಿ ಕ್ವಾಣ ಒಂದಕ್ಕೆ ಹಗ್ಗ ಹಚಿಗೆಂಡು ಬಂದು ಅಲ್ಲಿ ಇದ್ದ ಗುಡಿ ಮುಂದಿನ ಆಲದ ಮರಕ್ಕ ಕಟ್ಟಿ ಹಾಕಿದ್ದರು. ಅದು ಕಟ್ಟಿ ಹಾಕಿದ್ದಕ್ಕೆ ಪ್ರತಿಭಟಿಸಲು ಜಗ್ಗಾಡುತ್ತಾ ಆಗಾಗ ಹೊಂಯ್....ಅಂತ ಧರುಕಿ ಹೊಡೆದು ಕೊಸರಾಡುತ್ತಿತ್ತು. ಕೈಯಾಗ ಹಗ್ಗ ಹಚಿಗೆಂಡು ತಮ್ಮ ಹರಕೆ ಸಲ್ಲಿಸಲು ಬಂದವರ ಕುರಿ-ಆಡುಗಳು ತಮ್ಮ ಸಾವಿನ ಸುದ್ದಿ ತಿಳಿದವುಗಳಂತೆ ಬ್ಯಾ.... ಅಂತ ಚೀರಿಡುತ್ತಿದ್ದವು. ಡೊಳ್ಳು-ಕುಣಿತ ಸನಾದಿ ಹಲಗೆಗಳ ಬಡಿತನ ಲಯಕ್ಕೆ ಒಳಗಾದವರಂತೆ ಜನವೆಲ್ಲಾ ಒಂದು ನಮೂನೆಯ ಲಹರಿಯಲ್ಲಿ ಭಯ ಭಕ್ತಿಯಿಂದ ಓಡಾಡುತ್ತಿದ್ದರು. ಬಳಿ ಅಂಗಡಿ, ಮಿಠಾಯಿ ಅಂಗಡಿಗಳ ಮುಂದ ಹೆಣ್ಣು ಮಕ್ಕಳ ಚೌಕಾಸಿ ವ್ಯಾಪಾರ ಭರ್ಜರಿಯಾಗಿ ನಡೆದಿತ್ತು.

ಸೂರ್ಯ ನೆತ್ತಿ ಮ್ಯಾಲ ಬಂದಾಗ ದೇವಿ ಉತ್ಸವಕ್ಕೆ ರಂಗು ಬರತೊಡಗಿತು. ದೇವಿ ಗುಡಿಯ ವಿಶಾಲ ಬಯಲಿನಲ್ಲಿ ಹೆಜ್ಜೆ ಇಡಲು ಸ್ಥಳವಿಲ್ಲದಂತೆ ಜನವೋ ಜನ. ನೂರಾರು ಕುರಿಗಳು, ಕೋಳಿಗಳು, ದೇವರ ಕ್ವಾಣ ಬಲಿಗಾಗಿ ಕಾದಿದ್ದವು. ಎಲ್ಲಾ

ಕಡೆ "ದೇವಿ ನಮ್ಮಪ್ಪ ಕಾಪಾಡು" ಎನ್ನುವವರೇ ಎಲ್ಲರೂ. ಬಾಜಾಬಜಂತ್ರಿ, ಹಲಗೆ ಡೊಳ್ಳು ಮೇಳದೊಂದಿಗೆ ಗೌಡರು ಬರತೊಡಗಿದರು. "ಗೌಡರ ಮನೇರು ಬಂದ್ರು ಸರಿ.... ಸರಿ.... ಎಂದು ಗೌಡರ ಆಳುಮಕ್ಕಳು, ತಳವಾರರು ದಾರಿ ಬಿಡಿಸಿಕೊಟ್ರು ಜಾತ್ರೆಗೆ ಬಂದ ಮಂದಿ ಎಲ್ಲಾ ಸರ್ರು ದಾರಿ ಮಾಡಿಕೊಟ್ಟು ಗೌಡರ ಮನೆಯವರ ಕಡೆ ಭಯ-ಭಕ್ತಿಯಿಂದ ದಿಟ್ಟಿಸತೊಡಗಿದ್ದರು. ಬಾಜಾಬಜಂತ್ರಿಯೊಂದಿಗೆ ಬಂದ ರತ್ನಮ್ಮಗೌಡ್ತಿ, ಭೀಮಪ್ಪಗೌಡ್ರು ದೇವತೆಗೆ ಕಾಯಿ ಒಡೆಸಿ ನೈವೇದ್ಯ ನೀಡಿದಾ ಸೊಕ್ಕ ಪೂಜಾರಿ ಮಂಗಳಾರತಿ ನೀಡಿ ಗೌಡ್ತಿಗೆ ಮತ್ತು ಗೌಡ್ರ ಹಣೆಗೆ ಆಧಾ ಹಚ್ಚಿದ. ಅದೇ ಹೊತ್ತಿಗೆ ಕೈಯಲ್ಲಿ ಭಾರಿ ಚಪ್ಪಗೊಡಲಿಯೊಂದನ್ನು ಹಿಡಿದ ಕೊಂಡಿದ್ದ ತಿಮ್ಮ ತನ್ನ ಹೇಣ್ತಿ ಚಂದ್ರಿಯೊಂದಿಗೆ ದೇವಿ ದರ್ಶನಕ ಬಂದ. ಚಂದ್ರಿ ನೋಡಿದ ತಡ ಭೀಮಪ್ಪಗೌಡನಿಗೆ ತಾನಿಲ್ಲಿದ್ದೇನೆ ಎಂಬುದನ್ನು ಕ್ಷಣ ಮರೆತು "ಎ ಇವಳ ಪೊಡ್ಲಿಗಿಂತ ಚಂದಾಗ್ಯಾಳಲ್ಲಪ್ಪ" ಎಂದು ಮನದಲ್ಲಿ ಅಂದುಕೊಂಡ ಪೂಜಾರಿ 'ಚಂದ್ರಿ' ಹಣೆಗೆ ಪರಿಶಿಣ ಕುಂಕುಮ ಹಚ್ಚಿ ಬಲಿ ಕೊಡಲು ಬಂದ ತಿಮ್ಮ ಹಣೆಗೂ ಕೂಡ ಆಧಾರ ಹಚ್ಚಿದ.

"ಏನ್ ಚಂದ್ರಿ ಆರಾಮ ಇದ್ದೀನವ್ವಾ" ಎಂದು ರತ್ನಮ್ಮಗೌಡ್ತಿ ಚಂದ್ರಿ ಕ್ಷಣ ಮಾತಿಗೆಳೆದಳು. ತಮ್ಮ ಹೊಲದಲ್ಲಿ ತುಂಬ ವರುಷ ಕೆಲಸ ಮಾಡುತ್ತಿದ್ದ ತಿಮ್ಮನ ಹೇಣ್ತಿ ಬಗ್ಗೆ ಅವರಿಗೂ ಅಲ್ಪಸ್ವಲ್ಪ ಪರಿಚಯವಿತ್ತು. ನಂಜಿಗಸ್ಟ ಆಳಾಗಿ ತಿಮ್ಮ ಅಚಾನಕ್ಕ ಆಗಿ ಊರು ಬಿಟ್ಟು ಹೋದದ್ದರ ಬಗ್ಗೆ ಆಕೆಗೂ ಕುತೂಹಲ ಇತ ಹೊರ್ತು ವಿಷಯ ಇದೇ ಅಂತ ಗೊತ್ತಾಗಿರಲಿಲ್ಲ.

"ಆರಾಮ ಇದ್ದೀನ್ರಿಯವ್ವಾ, ನೀವು ಹೇಗ್ ಇದೀರಿ" ಎಂದು ಚಂದ್ರಿಯ ಗೌಡ್ತಿಯ ಸಮೀಪ ಬಂದಳು. ಪಾಪ, ಗೌಡಗ ಮೂರನೇ ಹೇಣ್ತಿಯಾಗಿ ಬಂ ಇಕೀ ಏನು ಸುಖ ಪಡದಾಳು ಅಂತ ರತ್ನಮ್ಮಗೌಡ್ತಿ ಬಗ್ಗೆ ಗೌರವ-ಅಭಿಮಾನ ಕರುಣೆವುಳ್ಳ ಚಂದ್ರಿಗೆ ರತ್ನಮ್ಮಗೌಡ್ತಿ ಬಗ್ಗೆ ಪ್ರೀತಿ ಇತ್ತು. ತನ್ನ ಪಾರಿಗೆಯ ಚಂ ಯೊಂದಿಗೆ ನಾಕು ಸುಖ ದುಃಖದ ಮಾತಾಡಿದರಾಯಿತೆಂದುಕೊಂಡ ರತ್ನಮ್ಮಗೌ ಚಂದ್ರಿಯನ್ನು ಕುರಿತು "ಬಾ ಇಲ್ಲೀನ ಮಾತ್ನಾಡಿ. ಇನ್ನೇನು ಬ್ಯಾಟಿ ಬೀಳೊ ಹೊತ್ತು. ಮನ್ಯಾಗ ಉಣ್ಣ ವಂತೆ" ಎಂದು ಕರೆದಳು.

"ಯವ್ವಾ ನೀವು ನಡಿರಿ, ನಾ ಬ್ಯಾಟಿ ಬೀಳೋದನ್ನ ನೋಡಿಕೆಂಡು ಮನಿ ಬಂದು ಉಂಡು ಹೋಗ್ತಿನ್ರಿ" ಎಂದು ಚಂದ್ರಿ ಹೇಳಿದಾಗ ಒಪ್ಪಿಕೊಂಡು ಹಾಲಗಂ ರೊಂದಿಗೆ ಮನೆ ಕಡೆ ನಡೆದಳು ರತ್ನಮ್ಮಗೌಡ್ತಿ.

ಇತ್ತ ಗೌಡ್ರಿಗೆ ಆಲದ ಮರದ ಕೆಳಗೆ ಜಮಖಾನ ಹಾಸಿ ತಕ್ಕೆ ಇ ಕುಂದ್ರಿಸಲಾಯಿತು. ಹಲಗೆ, ಬ್ಯಾಂಡು, ಡೊಳ್ಳು ಕುಣಿತ ಈಗ ಬಹಳ ಎತ್ತ

ಏರಿದ್ದವು. ಅಲ್ಲಲ್ಲಿ 'ದೆವ್ವ' ಹೊಕ್ಕ ಹೆಂಗಳೆಯರು ಕೂದಲು ಮುಡಿ ಬಿಚ್ಚಿಕೊಂಡು ಜೋಲಿ ಹೊಡೆಯುತ್ತಾ ಡೊಳ್ಳಿನ ಮುಂದೆ 'ಹಾಂ....ಹೂಂ' ಎಂದು ಕೊಂಡು ಕುಣಿಯತೊಡಗಿದ್ದರು. ಆ ಭರಾಟೆಯಲ್ಲಿ ಅವರ ಸೆರಗು ನೆಲದ ಪಾಲಾಗಿ ಕೆಲವರ ತುಂಬಿದ ಎದೆ–ಸೊಂಟ ಹರೆದ ಹುಡುಗರ ಕಣ್ಣಿಗೆ ಖುಷಿ ಕೊಡತೊಡಗಿದ್ದವು. ಹಿಂಗಾಗಿ ಹರೆದ ಹುಡುಗರೆಲ್ಲಾ ಇನ್ನೇನಾದರು ಅದ್ಭುತ ಕಂಡೀತೂ ಎಂದು ಕುತೂಹಲಿಗರಾದಂತೆ ದೆವ್ವ ಹೊಕ್ಕವರ ಕುಣಿತದ ಕಡೆಯೇ ಏಕಾಗ್ರ ಚಿತ್ತದಿಂದ ದಿಟ್ಟಿಸತೊಡಗಿದ್ದರು. ಇದನ್ನೆಲ್ಲಾ ಕಂಡ ಕೆಲ ಹಿರಿಯ ಹೆಂಗಸರು ಓಡೋಡಿ ಬಂದು "ಥೂ.... ನಿಮ್ಮ ಜಂಯಾಗನ ಜಟ್ಟಿ" ಎಂದು ದವ್ವಕ್ಕೊ ಅಥವಾ ಸುತ್ತಲೂ ಜೊಲ್ಲು ಸುರಿಸುತ್ತಾ ನಿಂತ ಹರೆದ ಹುಡುಗರಿಗೋ ಬಯ್ದು ಆ ದೆವ್ವ ಹೊಕ್ಕವರಿಗೆ ಸೆರಗು ಹೊದಿಸಿ ಆ ಕಡೆ ಈ ಕಡೆ ರಟ್ಟೆ ಹಿಡ್ದು ಸಂಭಾಳಿಸುತ್ತಿದ್ದರು. ಇವರ ಸಂಭಾಳಿಕೆ ಹೆಚ್ಚಾದಂತೆ ದೆವ್ವ ಹೊಕ್ಕವರ ಕುಣಿದಾಟ ತಾರಕಕ್ಕೆ ಏರುತ್ತಿತ್ತು. ತಲೆ–ಯನ್ನು ಹಿಂದಕ್ಕೂ ಮುಂದಕ್ಕೂ ಮಾಡಿಸುತ್ತಾ ಮೈಯನ್ನು ತರ ತರ ನಡುಗಿಸುತ್ತ ನಾ....ಹೋಗ್ತಿನಿ, ನಾ....ಹೋಗ್ತಿನಿ ಬಿಡ್ರಿ ಎಂದು ಕೊಸರಾಡುತ್ತಿದ್ದರು.

"ಯಾ ಭೋಸುಡಿ ಸವತಿ ಮೈ ಹೊಕ್ಕಾಳೋ ಏನೋ, ನಮ್ಮವ್ವ ದೇವಿ ಮುಂದ ನಿಂದ್ರಲಾರದೇ ಹೋಗ್ತಿನಿ ಅಂತಾದ ನೋಡು" ಎಂದು ದೆವ್ವಕ್ಕೆ ಹಿಡಿ ಶಾಪ ಹಾಕಿದ ಹೆಂಗಸರು, ಯವ್ವಾ ದೇವಿ ನಮ್ಮವ್ವ ಕಾಪಾಡವ್ವೊ ಎಂದು ಕೈ ಎತ್ತಿ ಮುಗಿತಿದ್ದರು.

ದೇವಿ ಮುಂದ ಇನ್ನೊಮ್ಮೆ ಮಹಾಪೂಜೆ ಮಾಡಿ ಬಂದ ಪೂಜಾರಿ ಅರಿಷಣ ತಂದು ಗೌಡ್ರ ಆಳುಮಕ್ಕು ಬಲಿ ಕೊಡಲಾಕ ಹಿಡಕೊಂಡು ನಿಂತಿದ್ದ ಕ್ವಾಣದ ಹಣೆಗಿ ಹಚ್ಚಿ ಒಂದು ನಿಂಬಿಕಾಯಿ ಕತ್ತರಿಸಿ ಒಗ್ದು ಸರಿದು ನಿಂತನು. ಇಡೀ ಜನ ಜಂಗುಳಿ–ಯೆಲ್ಲಾ ನಿಬ್ಬೆರಗಾಗಿ ಏಕಾಗ್ರ ಚಿತ್ತದಿಂದ ಈ ಕಡೆಯೇ ನೋಡುತ್ತಿತ್ತು. ಉಸಿರು ಬಿಗಿ ಹಿಡ್ದು ಎಲ್ಲರೂ ಗೌಡರ ಅಪ್ಪಣೆಗಾಗಿ ಕಾಯುತ್ತಿದ್ದರು.

ಸಾಕಷ್ಟು 'ಯಣ್ಣಿ' (ಸರೆ) ಹಾಕಿಕೊಂಡು ಬಂದಿದ್ದ ತಿಮ್ಮ ಯಮ ಕಿಂಕರನಂತೆ ಕೈಯಲ್ಲಿಯ ಚಪಗೊಡಲಿಯಿಂದ ಕ್ಷಣದಲ್ಲೆ ಬಲಿ ಅರ್ಪಿಸಲು ಸಿದ್ಧನಾಗಿ ನಿಂತಿದ್ದ. ಕಟ್ಟು ಮಸ್ತಾದ ಉಕ್ಕಿನ ದೇಹಸಿರಿಯ ತಿಮ್ಮನ ಹುರಿಬಿಗಿದಂತಿರುವ ತೋಳುಗಳ ಕಡೆ ಜಾತ್ರಿಗೆ ಬಂದ ಜನರೆಲ್ಲರ ದೃಷ್ಟಿ ಈಗ ಇತ್ತು. ಕಾಲಿಗೆ ಹಗ್ಗ, ಹಣೆಗೆ ಹಗ್ಗ ಹಚ್ಚಿ ನಾಲ್ಕಾರು ಮಂದಿ ಹಿಡ್ಕೊಂಡು ನಿಂತಿದ್ದರೂ ಸಹ ಕ್ವಾಣ ಒಂದೇ ಸಮನೆ ಜಗ್ಗಾಡುತ್ತಿತ್ತು. ಹಲಗೆ ಸನಾದಿ ಡೊಳ್ಳುಗಳ ವಾಲಗ ಈಗ ಏರ ತಾರಕದಲ್ಲಿತ್ತು. ಗೌಡರು ದೇವಿ ಕಡೆ ಒಮ್ಮೆ ದಿಟ್ಟಿಸಿ ಭಕ್ತಿಯಿಂದ ನಮಿಸಿ ತಿಮ್ಮನಿಗೆ ಕೈ ಸನ್ನೆ ಮಾಡುವದೇ ತಡ "ತಾಯಿ ನಮ್ಮವ್ವ ಕಾಪಾಡು" ಎಂದವನೇ ತಿಮ್ಮ ಮಸೆದ ಚಪ್ಪಗೊಡಲಿಯಿಂದ ತನ್ನೆಲ್ಲಾ ಶಕ್ತಿ ಹಾಕಿ ಕೋಣದ ಶಿರಕ್ಕೆ ಅಪ್ಪಳಿಸಿದ.

ಚಿಲ್ಲನೇ ಹಾರಿತು ರಕ್ತ. ಪಿಲ ಪಿಲನೇ ಒದ್ದಾಡುವ ದೇಹವನ್ನೇ ಕೈಲಿ ಹಿಡಿದು ಬಿದ್ದ ಶಿರ ನೋಡುತ್ತಲೇ ಸೇರಿದ್ದ ಜನರೆಲ್ಲಾ "ತಾಯಿ ನಮ್ಮಪ್ಪ" ಎಂದು ಭಾವೋದ್ವೇಗದಿಂದ ಕೂಗಿದರು. ಒದ್ದಾಡಿ ಒದ್ದಾಡಿ ನಿಸ್ತೇಜವಾದ ಕೋಣದ ಕಾಲೊಂದನ್ನು ಕಡಿದು ಈಗಾಗಲೇ ದೂರ ಬಿದ್ದಿದ್ದ ಅದರ ಶಿರದ ಬಾಯಿಗಿಟ್ಟು ದೇವತಿಯ ಮುಂದೆ ತಂದಿಡಲಾಯಿತು. ಇಷ್ಟಾಗುವಷ್ಟರಲ್ಲಿ ಅಲ್ಲಲ್ಲಿ ಕುರಿ–ಆಡು ಕೋಳಿಗಳ ಬಲಿ ಆರಂಭವಾಯಿತು. ಎಲ್ಲೆಡೆ ಬ್ಯಾ ಎನ್ನುವ ಕುರಿಗಳ ಅಳಲು–ಕೋಳಿಗಳ ಆರ್ತನಾದದಿಂದ ಇಡೀ ಪರಿಸರವೇ ಒಂದು ಕ್ಷಣ ಕೆಂಪಾಗಿ ಹೋದಂತೆ ಆದಾಗ ಆದಾಗಲೇ ಸಾಕಷ್ಟು ಕುಡಿದು ಟೈಟಾಗಿದ್ದ ತಿಮ್ಮ ನೆತ್ತರ ಕಂಡು ಬೆಪ್ಪ ಬಂದವನಂತೆ ಅಲ್ಲೇ ಸ್ವಲ್ಪ ದೂರದಲ್ಲಿಯ ಗಿಡ ಒಂದರ ಕೆಳಗೆ ಅಡ್ಡಾದ.

ಬ್ಯಾಟಿ ಬಿದ್ದ ತಕ್ಷಣವೇ ಜನ ಸ್ವಲ್ಪ ಸ್ವಲ್ಪವಾಗಿ ಚದುರ ತೊಡಗಿದರು. 'ಚಂದ್ರಿ' ಮನಿ ಕಡೆ ಹೊರಟದ್ದು ಗಮನಿಸಿದ ತಳವಾರ ಭೀಮ್ಯಾ ತನ್ನ ಜೊತೆಗೆ ಗೌಡರ ಇನ್ನೊಂದೆರಡು ಆಳುಗಳನ್ನು ಕರೆದುಕೊಂಡು ಹೊರಟ. ಜನ ಸಂದಣಿ ಇಲ್ಲದ, ಯಾರು ಯಾರನ್ನು ಅಷ್ಟಾಗಿ ಗಮನಿಸದ ಸಂದಿಯೊಂದರಲ್ಲಿ ಗಪ್ಪನೆ ಚಂದ್ರಿಯ ಬಾಯಿ ಒತ್ತಿ ಹಿಡಿದು ಬಟ್ಟೆ ತುರುಕಿ ಹೊತ್ತು ಕೊಂಡವರೇ ಗೌಡರ ತೋಟದ ಮನೆ ಕಡೆ ಓಟಕಿತ್ತರು.

ಬ್ಯಾಟಿ ಬೀಳುವದೇ ತಡ ಅಷ್ಟೊತ್ತು ಸುಮ್ಮನೇ ನಿಂತಿದ್ದ ಗುಡಿ ಪೂಜಾರಿ ಹ್ರಾಂ....ಹ್ರೂಂ ಎಂದು ನಿಂತಲ್ಲೇ ತಲೆದೂಗಿಸುತ್ತ ಜೋಲಿ ಹೊಡೆಯುತ್ತಾ ಹಾರಾಡತೊಡಗಿದ. ಪೂಜಾರಿ ಹಾರಾಟ ಹೆಚ್ಚಾದೊಡನೆ ಡೊಳ್ಳು–ಹಲಗೆಗಳ ಶಬ್ದ ತಾರಕಕ್ಕೇರ ತೊಡಗಿತು. 'ದೇವತಿ ಬಂದಾಳ'....'ದೇವತಿ ಬಂದಾಳ' ಎಂದು ಜನ ಗುಸು ಪಿಸು ಮಾತಾಡಿಕೊಂಡು ಮತ್ತೆ ಗುಡಿ ಕಡೆ ಓಡಿ ಬಂದು ಸೇರತೊಡಗಿದ್ದರು. ಹಿಂಗಾಗಿ ಚಂದ್ರಿಯನ್ನು ಹೊತ್ತು ಕೊಂಡಯ್ದವರ ಕಡೆ ಯಾರ ವಿಶೇಷ ಗಮನ ಹರಿಲೇ ಇಲ್ಲ. ಕಂಡ ಕೆಲವರು ಇದು ತಮಗ ಯಾಕಬೇಕು ಹೇಳಿ ಕೇಳಿ ಗೌಡ್ರ ಆಳು ಮಕ್ಳು, ಗೌಡನ ಹೇಳಿರಬೇಕು ಎಂದು ಕುಂಡಿಬಾಯಿ ಮುಚ್ಚಿಕೊಂಡು ದೇವತಿ ಹೇಳಿಕೆ ಕೇಳಲು ಬಂದು ನಿಂತರು.

ಪೂಜಾರಿ ಕೈ ಎತ್ತಿ "ಸೈಲೆನ್ಸ್" ಎಂದು ಹೇಳುವಂತೆ ಕೈ ಎತ್ತಿದೊಡನೆ ಡೊಳ್ಳು ಹಲಗೆಗಳ ಶಬ್ದ ನಿಂತಿತು. ಆಗ ದೇವತಿ ಹೇಳಿಕೆ ಆರಂಭ ಆಯ್ತು. "ತುತ್ತೂರ್ ಮುಂಗಾರಿ ಮಿಂಚಿತು... ತುತ್ತೂರ್ ಮುಂಗಾರಿ ಮಿಂಚಿತು. ಜಪ್ಪನ್ನಾರು ದೇಶಕ್ಕ ಸರ್ವಮಳಿ ಕೊಟ್ಟಿನಿ. ಮುಂಗಾರಿ ಮುರಿದೇ ಹಿಂಗಾರಿ ಹತ್ತಾಗ.. ಬಡವರ ಬೆನ್ನಿಂದ ಇರ್ತಿನ್ರಿಲೇ. ನನ್ನ ಹೊಟ್ಟಿ ತಣ್ಣಗ ಮಾಡಿದ ನಿಮ್ಮ ಹೊಟ್ಟಿನು ತಣ್ಣಗ ಇಡ್ತಿನಿ ಹೋಗ್ರಿ" ಎಂದು ಹಕಾರಿ ಹೊಡೆಯುವದೇ ತಡ ಜನರೆಲ್ಲ "ದೇವತಿ ಹೇಳಿಕೆ

ಆಯ್ತು, ದೇವತಿ ಹೇಳಿಕೆ ಆಯ್ತು" ಎಂದು 'ಬಲಿ' ಬಾಡು ಉಣಲು ಮನೆ ಕಡೆ ನಡೆಯತೊಡಗಿದರು.

ತಿಮ್ಮನನ್ನು ಕೆಳಗೇರಿಯ ಯಲ್ಲವ್ವ ಮುದುಕಿ ಹುಚ್ಚನಾಯಿ ತಿರುಗು-ವಂತೆ ತಿರುಗಾಡಿ ಹುಡುಕ ತೊಡಗಿದ್ದಳು. ದೇವತಿ ಮುಂದ ಬಲಿ ಮುಗಿದ ತಕ್ಷಣ ಹಟ್ಟಿ ದಾರಿ ಹಿಡಿದು ಹೊರಟಿದ್ದವಳಿಗೆ ಕಾಲು ಮಡಿಯುವ ಒತ್ತಡ ಉಂಟಾಗಿ ಸಂದಿಯೊಂದರಲ್ಲಿ ಕಾಲು ಮಡಿಯಲು ಕುಳಿತಿದ್ದಾಗ ಚಂದ್ರಿಯನ್ನು ತಳವಾರ ಭೀಮ್ಯಾ ಹಾಗು ಗೌಡನ ಇತರ ಆಳುಮಕ್ಕಳು ಹೊತ್ಕೊಂಡ್ಯುಯ್ಯುವದನ್ನು ಕಂಡು ಅವಳು ಕಾಲು ಮಡಿಯುವದನ್ನು ಅರ್ಧಕ್ಕೆ ಬಿಟ್ಟು ದಿಗ್ಗನೇ ಎದ್ದು "ಥೂ ನನ್ನ ಹಾಟ್ಯಾಗೋಳ್ಯಾ,ದೇವತಿ ಜಾತ್ರಿ ದಿವ್ಸ ಇಂಥಾ ಕೆಲಸ ಮಾಡ್ತಿರೇನ್ಲಾ, "ಥೂ ನಿಮ್ಮ ಜನ್ಮಕ ಬೆಂಕಿ ಬಿಳ್ಲಿ, ಗೌಡನ ನಾಯಿಗೋಳ್ಯಾ, ಹಿಂಗೆ ಎಷ್ಟು ಜನ ನಮ್ಮ ಕೆಳಗೇರಿ ಹೆಂಗ್ಸರನ್ನು ಗೌಡನ ಹಾಸಿಗಿಗಿ ಹೋಯ್ತಿರಿ. ಗೌಡನ ಹೆಂಡದ ಆಸೆಕ್ಕ ನಿಮ್ಮ ಹೆಂಡರನ್ನು ಕೊಡೋ ತಾಯ್ಗ್ಗಂಡರ್ಯಾ" ಎಂದು ಬಯ್ದಾಡತೊಡಗಿದಳು. ಆದ್ಯಾವುದನ್ನು ಕಿವಿ ಮೇಲೆ ಹಾಕಿಕೊಳ್ಳದ ಗೌಡನ ಆಳುಮಕ್ಕಳು ಅಡ್ಡ ಬಂದ ಮುದುಕಿಯನ್ನು ದಬ್ಬಿ "ಲೇ ಮುದುಕಿ ಸುಮ್ನ ಬಾಯಿ ಮುಚ್ಚಿಕೊಂಡು ಕೇರಿಗೆ ಹೋಗಿ ಬಿದ್ಕೊ, ನೀನೇ ಅಲ್ಲೆನು ಗೌಡನ ಕಥಿಯನ್ನು ಹರಿಕಥೆ ಮಾಡಿ ಹೇಳಿ ಕೇರಿಯ ಹರ್‍ಯಾದ ಹುಡುಗ್ಯಾರ ತಲ್ಯಾಗ ತುಂಬಿ ಹಾಳು ಮಾಡಿದ್ದು. ಈಗ ಬಂದಾಳ ಹಳೇ ಜೋಗತಿ ಪತಿವ್ರತಿ ಆಗಲಾಕ" ಎಂದು ಬಯ್ದು ಹೋಗಿಬಿಟ್ಟಿದ್ದರು. ಮುದುಕಿ ಯಲ್ಲವ್ವ ಇಂಥ ಘಟನೆಗಳನ್ನು ಅನೇಕ ನೋಡಿದ್ದಳು. ಕೆಳಗೇರಿ, ಮ್ಯಾಗಿನ-ಗೇರಿ, ಆಗಸರ ಓಣಿ, ಪಿಂಜಾರ ಓಣಿ, ಹಿಂಗ ಎಲ್ಲಾ ಹುಡುಕ್ಯಾಡಿ ತಿಮ್ಮನನ್ನು ಕಾಣದೆ ಕೊನೆಯಲ್ಲಿ ಗೌಡನ ಮನೆಯಲ್ಲಿ ಏನಾದರೂ ಕಟ್ಟಿಗಿಟ್ಟಿ ಹಾಕ್ಯಾರೇನು ನೋಡಮು ಎಂದು ಗೌಡನ ಮನಿ ಒಳ ಬಂದಾಗ ಪಡಸಾಲೆಯ ತೂಗ ಮಣೆಯ ಮೇಲೆ ಗೌಡ್ತಿ ಒಬ್ಬಳೇ ಕಣ್ಣೀರು ಹಾಕುತ್ತಾ ಕುಳಿತಿರುವದನ್ನು ಕಂಡು ಕ್ಷಣ ದಿಗ್ಮೂಢಳಾದಳು.

"ಯಾಕ ಯವ್ವಾ ಅಳ್ಳಾಕ ಹತ್ತಿದಿ" ಎಂದು ಕಕ್ಕಲಾತಿಯಿಂದ ಕೇಳಿದಳು, ತಾನು ಬಂದ ಕೆಲಸವನ್ನು ಗೌಡ್ತಿಯ ಸಂಕಟ ಕಂಡು ಕ್ಷಣ ಮರೆತಿದ್ದಳು.

"ಬಾರಾ ಯಲ್ಲವ್ವ, ಯಾಕೂ ಇಲ್ಲ ನನ್ನ ಹಣೆಬರಹಕ್ಕ ಅಳ್ಳಾಕ ಹತ್ತಿನಿ. ನನಗ ಏನಿದ್ದರ ಏನಾವ ಹೇಳು" ಎಂದು ಕಣ್ಣೀರು ಒರೆಸಿಕೊಂಡು ಒಳ ಹೋದಳು.

ಮನೆಯಲ್ಲಿ ಗೌಡನು ಇಲ್ಲ. ಆಳು ಮನುಷ್ಯಾರು ಇರಲಿಲ್ಲ. ಗೌಡ್ತಿ ಒಬ್ಬಳೇ ಆಳ ಅಂಥವ್ಯಾಲ ತಿಮ್ಮನ್ನ ಇಲ್ಲಿ ತಂದಿರಲಿಕ್ಕಿಲ್ಲ. ಎಲ್ಲ್ಯರ ಕಾದಿಸಿ ಕೆಡವಿರಬೇಕು

ಅಂದುಕೊಂಡವಳಿಗೆ ಇನ್ನೊಮ್ಮೆ ಗುಡಿ ಹತ್ತಿರ ಹೋಗಿ ನೋಡಬೇಕೆನಿಸಿದ್ದೆ ತ
ಗೌಡ್ತಿಗೆ ಹೇಳುವದನ್ನು ಮರೆತು ಗುಡಿ ಕಡೆ ನಡೆದಿದ್ದಳು.

ಹೋಳಿಗೆ, ಹಪ್ಪಳ ಅನ್ನವನ್ನು ಗಂಗಾಳ ತುಂಬಿಕೊಂಡು ಯಲ್ಲವ್ವನಿ
ಕೊಡಲು ಹೊರ ಬಂದ ಗೌಡ್ತಿಗೆ ಆಕಿ ಕಾಣಲೇ ಇಲ್ಲ. "ಕೋಡಿ ಮುದು
ಯಾಕಡೆ ಹೋಯ್ತೋ ಏನೋ" ಅಂದುಕೊಂಡು ಅಲ್ಲೆ ಒಂದೆಡೆ ಇಟ್ಟು ಮತ್ತೆ ಅಲ್ಲ
ಪಡಸಾಲೆಯಲ್ಲಿ ಒಂದು ಜಮಖಾನಿ ಹಾಸಿಕೊಂಡು ಅಡ್ಡಾದಳು. ಮುದುಕಿ ಯಲ್ಲವ್ವ
ದೇವತಿ ಗುಡಿ ಹತ್ತಿರ ಬಂದಾಗ ಅಲ್ಲಿ ಯಾರು ಕಾಣಲೇ ಇಲ್ಲ. ದೇವತಿ ಮುಂ
ತಾಸೊತ್ತಿನ ಹಿಂದ ಕಡ್ದು ಇಟ್ಟ ಕೋಣನ ಮುಖ, ಕುರಿಗಳ ಮುಖಗಳ ಜೊ
ದೊಡ್ಡದಾಗಿ ಚಿಮಣಿ ದೀವಿಗೆ ಉರಿತಿತ್ತು.

ಈ ತಿಮ್ಮ ಎಲ್ಲಿ ಹೋದ್ನೊ ಶಿವನೇ ಎಂದು ಅಲ್ಲೆಲ್ಲಾ ನೋಡುತ್ತಿನವಳಿ
ಅಲ್ಲಿಗೆ ಸ್ವಲ್ಪ ದೂರದಲ್ಲಿ ಅರಳಿ ಮರದ ಕೆಳಗೆ ಯಾರೋ ಮಕ್ಕೊಂಡದ್ದು ಕಂಡು ಆಕ
ಓಡಿ ಬಂದಳು. ಬಂದು ನೋಡ್ತಾಳ ತಿಮ್ಮ! ಅಸ್ತ ವ್ಯಸ್ತವಾಗಿ ಬಿದ್ದು ಕೊಂಡಿದ್ದ
ಅವನ ಬಾಯಿಗೆ ಮುಖ ಸಮೀಪ ತಂದು ನೋಡಿದಳು. ಕಂಟ್ರಿ ಸರಾಯಿ ವಾಸ
ಗಬ್ಬೆದ್ದು ಬರ್ತಿತ್ತು. ಯಲ್ಲವ್ವಗ ಈಗ ಸಿಟ್ಟಿನಿಂದ ಮೈಯಲ್ಲಾ ಉರಿಯಿತು
"ಥೂ, ನನ್ನ ಹಾಟ್ಯಾ; ಅಲ್ಲಿ ಹೇಣ್ತಿನ ಹೊತ್ಕೊಂಡು ಹೋಗಿ ಗೌಡ ಕೆಡಸಲಾ
ಹತ್ತ್ಯಾನ. ಇವ ನೋಡಿದರ ಇಲ್ಲಿ ಕುಡ್ದು ಬಿದ್ದಾನ. ನಮ್ಮ ಕೆಳಗೇರಿ ಚಿಕನಾಸಿಗ
ಜೀವ್ನಾ ಇಟೇಆಯ್ತು" ಎಂದು ಬಯ್ದುಕೊಳ್ಳುತ್ತಲೇ, ಲೋ ತಿಮ್ಮ ನನ್ನ ಹಾಟ್ಯಾ
ಏಳಲೋ ಎಂದು ಜಗ್ಗಾಡತೊಡಗಿದಳು. ಕುಡಿದದ್ದು ಹೆಚ್ಚಾಗಿದ್ದಲ್ಲದೇ ನಿತ್ರಾ
ಕಂಡು ಬವುಳಿ ಬಂದವನಂತೆ ಮಕ್ಕಂಡಿದ್ದ ತಿಮ್ಮ ಎಷ್ಟು ಜಗ್ಗಾಡಿದರೂ ಎಚ್ಚರಾ
ಗಲೇ ಇಲ್ಲ.

ಅಲ್ಲೆಲ್ಲರ ಸ್ವಲ್ಪ ನೀರು ಸಿಗ್ತಾವೇನೋ ಎಂದು ಸುತ್ತಲು ನೋಡಿದಳ
ಏನು ಕಾಣಲಿಲ್ಲ. ಆ ಕಡೆ ಈ ಕಡೆ ನೋಡಿದವಳೇ ಗಬಕ್ಕನೇ ತಿಮ್ಮನ ಮುಖದ ಮೇ
ಚೆಲ್ಲುವಂತೆ ಕಾಲು ಮಡಿಯಲು ಕುಳಿತಳು. ಸ್ವಲ್ಪ ಸ್ವಲ್ಪವಾಗಿ ಅವನಲ್ಲಿ ಎಚ್ಚ
ಮೂಡತೊಡಗಿರುವವನ್ನು ಕಾಣುತ್ತಲೇ ಗಬ್ಬಕ್ಕನೇ ಎದ್ದುಕೊಂಡ ಮುದು
ವಾಚಾಮಗೋಚರವಾಗಿ ಅವನಿಗೆ ಬಯ್ಯತೊಡಗಿದಳು.

ಪೂರ್ಣ ಎಚ್ಚರಗೊಂಡ ತಿಮ್ಮನಿಗೆ ಅವಳ ಬಯ್ಗುಳದ ಮಧ್ಯೆ ತಾನು ಬ
ಮುಗಿಸಿ ಅಡ್ಡಾದ ಮೇಲೆ ನಡೆದ ದುರ್ಘಟನೆ ತಿಳಿದು ಕ್ಷಣ ದಂಗು ಬಡಿದು ಕುಳಿ
ನಂತರ ನಿಧಾನವಾಗಿ ಸಿಟ್ಟು ಮೈತುಂಬಿ ಪಕ್ಕದಲ್ಲೆ ಬಿದ್ದಿದ್ದ ತನ್ನ ಚಪ್ಪಗೊಡಲ
ಯನ್ನು ಎತ್ತಿಕೊಂಡು ಗೌಡನ ತ್ವಾಟದ ಮನೆ ಕಡೆ ಓಡತೊಡಗಿದ. ಈಗ ಅವ
ಓಟದಲ್ಲಿ ಶತಶತಮಾನಗಳ ಸಿಟ್ಟು ಗಟ್ಟಿಗೊಳ್ಳತೊಡಗಿತ್ತು.

# ಗುಲಾಬಿ ಹೂವಿನ ಗೀತೆ

ಅರಳಿ ನಳ ನಳಿಸುವ ಮುಂಚೆ
ಮುದುಡಿ ಹೋದ ಗುಲಾಬಿಯ ಹೂವೆ.
ಕೆಂಪಡರಿದ ಸೂರ್ಯಾಸ್ತಕೆ ಅರುಣೋದಯದ
ಮೆರಗ ನೀಡಿದ ನಿನ್ನ ಪಕಳೆಗಳನ್ನೆಲ್ಲಾ
ಹಿಸುಕಿದಾಗ ಕೆಂಧೂಳಿಯೋ ಕೆಂಧೂಳಿ
ಜಗವೆಲ್ಲಾ ರಕ್ತದೋ ಕುಳಿ
ಕಾಲಗರ್ಭಕ್ಕೆ ಎಣೆಗುಂಟವರಿ ಇಣುಕಿದಾಗ
ಅವತಾರದ ಹತ್ತು ಅವಶೇಷಗಳು
ಏನೇನೋ ಅಚಾತುರ್ಯದ; ಅಗಮ್ಯದ ಅಶೀತದ
ಪರಿವೆಯೇ ಇಲ್ಲದ ಪಡಿಪಾಟಲುಗಳು

ರಾಜಾಧಿರಾಜರು, ಚಂಡ ಪ್ರಚಂಡರು ಉರ್ಧಂಡ ಮಾರ್ಥಾಂಡರು
ರಾಮ ರಾವಣ ಧರ್ಮ ದುರ್ಯೋಧನಾದಿಗಳು
ಅವತಾರದ ಅನಾಮಿಕ ಆಗುಹೋಗುಗಳ
ತಾಳಕ್ಕೆ ಕಾಲೆಳೆದವರು; ಇಂತು

ಬಿರಿದು ಬರಿದಾದ ಬರಡು ಭೂಮಿಗೆ
ಮೋಡವೆಲ್ಲಾ ಮಳೆಯಾಗಿ; ಜಗವೆಲ್ಲಾ ಹಸಿರಾಗಿ
ನಳನಳಿಸಿತು ಹೂ....ಗುಲಾಬಿ ಬಸಿರಾಗಿ
ಪ್ರಸವಕು ಮುಂಚೆ ಪಶ್ಚಿಮದ ವಿಷಸರ್ಪ
ಸಂಜನೇರಿಸಿ ಮಂಜು ಮಬ್ಬಿಸಿ ಅಟ್ಟಹಾಸವ ಗೈದಿದೆ

ಅರಳಿ ಬಾಡಿ ಹೋಯಿತು ಗುಲಾಬಿ ಹೂ
ಮತ್ತೆ ಕೆಂಪಡರಿದ ಸೂರ್ಯಾಸ್ತ ಕತ್ತಲೆ, ಗಾಢಾಂಧಕಾರ.

— **ದಾನಲ ಮೆಲಿಕ್**



## "ಹೊಸ ದಿಕ್ಕು" ಪತ್ರಿಕಾ ಬಳಗಕ್ಕೆ ಶುಭಾಶಯಗಳು

ನಗರನಾಡಿನ ಕೇಂದ್ರ ಸ್ಥಳವಾದ ಶಹಾಪೂರದಿಂದ
ನೀವು ಗೆಳೆಯರು "ಹೊಸ ದಿಕ್ಕು" ಪತ್ರಿಕೆ
ತರುತ್ತಿರುವದು ಅಭಿನಂದನೀಯ. ಸಮೃದ್ಧವಾದ
ಕನ್ನಡ ಸಾಹಿತ್ಯದ ವಾಹಿನಿಯಲ್ಲಿ ಈ ಭಾಗದ
ಕೊಡುಗೆಯನ್ನು ನೀಡಿರುವ ನಿಮ್ಮ ಕಾರ್ಯ ಸ್ತುತ್ಯ.
**ನಿಮಗೆ ನಮ್ಮ ಹಾರ್ದಿಕ ಬೆಂಬಲವಿದೆ.**

**ಡಾ|| ಮಲ್ಲನಗೌಡ ಉಕನಾಳ** ಎಂ. ಬಿ. ಬಿ. ಎಸ್.

**ಈರಣ್ಣ ಮುಕಾಶಿ ಆಲ್ದಾಳ** ಗುತ್ತೆದಾರರು

---

**ಓದಿರಿ,**
"ತಿರುಳ್ಗನ್ನಡ" ೬೨ ನೇ ಅ.ಭಾ. ಸಾಹಿತ್ಯ ಸಮ್ಮೇಳನ ನೆನಪಿನ ಸಂಚಿಕೆ (೫೦೦ ಪುಟ ಬೆಲೆ ರೂ.೪೦ ಕ್ಕೆ ಲಭ್ಯ) ಹೈದ್ರಾಬಾದ ಕರ್ನಾಟಕದ ಪ್ರತಿಯೊಂದು ಕ್ಷೇತ್ರದ ಆಕರ ಗ್ರಂಥವೇ ಆಗಿರುವ ಈ ಸಂಚಿಕೆಗಾಗಿ ಬರೆಯಿರಿ, ಪ್ರೊ. ಅಲ್ಲಮ ಪ್ರಭು ಬೆಟ್ಟದೂರ, ಗವಿ ಸಿದ್ದೇಶ್ವರಕಾಲೇಜು ಕೊಪ್ಪಳ (ರಾಯಚೂರ ಜಿಲ್ಲೆ)

---

ಪ್ರಗತಿ ಪ್ರಕಾಶದಿಂದ ಈ ವರ್ಷ ಕೆಳಗಿನ ಕೃತಿಗಳು ಒಂದೇ ಸಲ ಪ್ರಕಟಗೊಳುತ್ತಿವೆ.

| | | | |
|---|---|---|---|
| ೧. | ಕೌದಿ | (ಕವನ ಸಂಕಲನ) | ಡಾ|| ಕಾಶೀನಾಥ ಅಂಬಲಗೆ |
| ೨. | ಪಾಂಚಜನ್ಯ | ( " ) | ಪ್ರಭು ಖಾನಾಪೂರೆ |
| ೩. | ಅವರು ಬಿಟ್ಟು ಇವರ್ಯಾರು | ( " ) | ಶಂಕ್ರಯ್ಯ ಘಂಟಿ |
| ೪. | "ಅಕ್ಷರ"–"ಒರೆಗಲ್ಲು" | (ಎರಡು ಬೀದಿ ನಾಟಕಗಳು) | ಪ್ರೊ. ಆರ್ .ಕೆ. ಹುಡುಗಿ |
| ೫. | ಹುಳುಗಳು | (ಕಥಾ ಸಂಕಲನ) | ಸೂಗಯ್ಯ ಹಿರೇಮಠ |
| ೬. | ಜನಪದ ಕಾವ್ಯ ಪ್ರಥಮ ವಿಮರ್ಶೆ | | ಸಂ. ಡಾ|| ವೀರಣ್ಣ ದಂಡೆ |

ಮೇಲಿನ ಪ್ರತಿಗಳ ಮುಂಗಡ ಬೆಲೆ ರೂ. ೧೦೦-೦೦ ಅನ್ನು ಎಂ. ಓ. ಅಥವಾ ಡಿ. ಡಿ. ಮೂಲಕ ಡಾ|| ಕಾಶೀನಾಥ ಅಂಬಲಗೆ, ಬೇವು ಬೆಲ್ಲ ಜಯ ನಗರ ಕಾಲನಿ, ವಿ. ವಿ. ರಸ್ತೆ ಕಲಬುರ್ಗಿ ಇವರಿಗೆ ಕಳಿಸಿರಿ.

# ಈ ಸಂಚಿಕೆಯ ಲೇಖಕರ ವಿಳಾಸಗಳು

* ಸಿದ್ಧರಾಮ ಹೊನ್ಕಲ್, "ಹೊಸ ದಿಕ್ಕು" ದಿಗ್ಗಿ ಬಿಲ್ಡಿಂಗ ಶಹಾಪೂರ ೫೮೫ ೨೨೩
* ಪ್ರೊ. ಕೆ. ವಿಶ್ವನಾಥ, ಪ್ರಾಚಾರ್ಯರು, ಎಂ.ಎಸ್.ಐ. ಡಿಗ್ರಿ ಕಾಲೇಜು ಗುಲ್ಬರ್ಗಾ
* ಡಾ॥ ಬಸವರಾಜ ಸಬರದ, ರೀಡರ, ಗುಲ್ಬರ್ಗಾ ವಿ. ವಿ. ಗುಲಬರ್ಗಾ.
* ಡಾ॥ ಅರವಿಂದ ಮಾಲಗತ್ತಿ, ಮಂಗಳೂರ ವಿ.ವಿ. ಮಂಗಳ ಗಂಗೋತ್ರಿ (ದ.ಕ.)
* ಅಮರೇಶ ನುಗಡೋಣಿ, ಕನ್ನಡ ವಿ. ವಿ. ಹಂಪಿ. ಜಿಲ್ಲಾ ಬಳ್ಳಾರಿ.
* ಪ್ರೊ. ವಸಂತ ಕುಷ್ಟಗಿ, ಪ್ರಾಚಾರ್ಯರು, ಎಸ್. ವಿ. ಕಾಲೇಜು ಗುಲಬರ್ಗಾ.
* ಕುಂ.ವೀ. ಅಂಚೆ ಗೂಳ್ಯಂ (ಕರ್ನೂಲ ಜಿಲ್ಲೆ ಆಂಧ್ರಪ್ರದೇಶ)
* ಎ. ಕೃಷ್ಣ, ಶಿಕ್ಷಕರು, ಪಂಚಮುಖಿ ಹನುಮಾನ ಮಂದಿರ ಸಮೀಪ ಸುರಪೂರ.
* ವೀರೇಶ ಸೌದ್ರಿ, ತೇರಿನ ಹತ್ತಿರ ಮನೆ, ಮಸ್ಕಿ ಅಂಚೆ (ರಾಯಚೂರ ಜಿಲ್ಲೆ)
* ರೈತಸುತ, ಮಹಾಂತೇಶ ವಿದ್ಯಾವರ್ಧಕ ಸಂಘ ಪ್ರೌಢಶಾಲೆ ಅಫಜಲಪೂರ
* ಮಾ. ರಾ. ರುದ್ರಾಚಾರ, ಎ.ಬಿ.ಎಲ್. ಶಹಾಬಾದ (ಕಲಬುರ್ಗಿ ಜಿಲ್ಲೆ)
* ಕಾವ್ಯರಸ ಪ್ರಿಯ, ಅಂಚೆ ಹೆಮನೂರ, ತಾ॥ ಸುರಪೂರ (ಗುಲಬರ್ಗಾ ಜಿಲ್ಲೆ)
* ಪ್ರೊ. ಶಿವಕುಮಾರ ಕಲ್ಲೂರ, ಅಂಚೆ ಕಮ್ಮತಹಳ್ಳಿ (ಹರಪನಹಳ್ಳಿ) ಬಳ್ಳಾರಿ ಜಿಲ್ಲೆ.
* ರಾಜಶೇಖರ ಎಸ್. ಮಾಂಗೆ, ಅಂಚೆ ಅಫಜಲಪೂರ, (ಗುಲಬರ್ಗಾ ಜಿಲ್ಲೆ)
* ದಾವಲ ಮಲಿಕ್, ಅಂಚೆ ಗುಂಡಳ್ಳಿ ತಾ॥ ಶಹಾಪೂರ (ಗುಲಬರ್ಗಾ ಜಿಲ್ಲೆ.)

## - ಓದಿರಿ -

"ಸಂಕ್ರಮಣ" ಮಾಸಿಕ ವಾರ್ಷಿಕ ಚಂದಾ ರೂ.೫೦ ಪ್ರೊ. ಚಂಪಾ, ಪ್ಲಾಟ ನಂ.೬೮ ಯುರೇಕಾ ಕಾಲನಿ ಧಾರವಾಡ.

---

'ಪ್ರಜ್ಞೆ' ಮಾಸಿಕ. ಸಂ; ರಾಜಪ್ಪ ದಳವಾಯಿ ಮಾನಸ ಗಂಗೋತ್ರಿ ಮೈಸೂರು ಅಂಚೆ

---

"ಅನ್ವೇಷಣೆ" ದ್ವೈಮಾಸಿಕ. ಸಂ; ಆರ್.ಜಿ. ಹಳ್ಳಿ ನಾಗರಾಜು, ೪೭೭, ೧೧ನೇ ರಸ್ತೆ, ಎ.ಪಿ.ಸಿ. ಬಡಾವಣೆ, ವಿಜಯ ನಗರ, ಬೆಂಗಳೂರು-೪೦. (ಚಂದಾ ರೂ. ೪೦)

---

"ಶೂದ್ರ" ಮಾಸಿಕ. ವಿಳಾಸ, ಶೂದ್ರ ಶ್ರೀನಿವಾಸ ನಂ. ೮೨೪, ೭ನೇ ಮೇನ ಇಸ್ರೋ ಲೇ ಔಟ, ಬೆಂಗಳೂರ. (ಚಂದಾ ರೂ. ೬೫)

---

"ಒಡಲಾಳ" ದ್ವೈಮಾಸಿಕ. ಸಂ: ಕೃಷ್ಣಮೂರ್ತಿ ಬೆಳಗೆರೆ, ಸರಕಾರಿ ಪ್ರ.ದ. ಕಾಲೇಜು ತುರುವೆಕೆರೆ. (ಚಂದಾ ರೂ. ೪೦)

---

"ಅಂತರಂಗದ ಹನಿಗಳು" (ಕವನ ಸಂಕಲನ ಬೆಲೆ ರೂ. ೧೦) ಸಿದ್ಧರಾಮ ಹೊನ್ಕಲ್
"ಕಥೆ ಕೇಳು ಗೆಳೆಯಾ...." (ಕಥಾ ಸಂಕಲನ ಬೆಲೆ ರೂ. ೧೫) ಸಿದ್ಧರಾಮ ಹೊನ್ಕಲ್
"ಅಕ್ಕಾನಿಗೊಂದು ಪ್ರಶ್ನೆ ಮತ್ತು ಇತರ ಕವನಗಳು (ಬೆಲೆ ರೂ. ೧೦ ಸಿದ್ಧರಾಮ ಹೊನ್ಕಲ್, ತಿಮ್ಮಯ್ಯ ಪುರ್ಲೆ ಸಂಪಾದಿತ
"ಬಿಸಿಲು ಬದುಕಿನ ಮಧ್ಯೆ" (ಸಂ: ಕವನ ಸಂಕಲನ ಬೆಲೆ ರೂ. ೧೦) ಚಂದ್ರಕಾಂತ ಕರದಳ್ಳಿ. ಎಂ. ಓ. ಸಹಿತ ಪ್ರತಿಗಳಿಗೆ ಬರೆಯಿರಿ. ಜಗದೀಶ ಹೊನ್ಕಲ್, **ಶ್ರೀ ಅಲ್ಲಮಪ್ರಭು** ಬುಕ್ ಸ್ಟಾಲ್ ಮತ್ತು ಜನರಲ್ ಸ್ಟೋರ್ಸ್, ಬಸ ಸ್ಟ್ಯಾಂಡ ಹತ್ತಿರ, ಗುಲಬರ್ಗಾ ರಸ್ತೆ, ಶಹಾಪೂರ ೫೮೫ ೨೨೩ (ಕಲಬುರ್ಗಿ ಜಿಲ್ಲೆ).




ಹೊಸದಿಕ್ಕು ಪತ್ರಿಕೆಗೆ ಶುಭಾಶಯಗಳು

ಜನತೆಯ ಸೇವೆಯಲ್ಲಿ ಯಶಸ್ವಿ ನಾಲ್ಕನೇ ವರ್ಷದಲ್ಲಿ ಮುನ್ನಡೆದ

# ಪ್ರಕಾಶ
# ಹಣಕಾಸು ಸೇವಾ ದೇವಿ, ಸಂಸ್ಥೆ

ಶಹಾಪೂರ-೫೮೫ ೨೨೩,

ಭಾಗಿದಾರರು

ಶ್ರೀಮತಿ. ಪುಷ್ಪಲತಾ ಚಂದ್ರಶೇಖರ ದೇಸಾಯಿ
ಶ್ರೀ ರವೀಂದ್ರನಾಥ ಶರಣಪ್ಪ ಹೊಟ್ಟಿ
,, ರವೀಂದ್ರನಾಥ ವೆಂಕೋಬರಾವ ಶಿರವಾಳಕರ
,, ಸಿದ್ದಪ್ಪ ನಚಪ್ಪ ಕಿಣ್ಣಿ
,, ಜಗದೀಶ ರಡ್ಡಿ ಮಾಲ್ಲಣ್ಣ
ರವೀಂದ್ರನಾಥ ಸಿದ್ದಪ್ಪ ಬಳಗಾರ
...ೀರಣ್ಣಗೌಡ ಸಿದ್ರಾಮಪ್ಪಗೌಡ ಶಹಾಪೂರ
...ುರೆಪ್ಪ ನಿಂಗಪ್ಪ ಹಯ್ಯಾಳಕರ್
...ರೀಶರಡ್ಡಿ ಅಮೀನರಡ್ಡಿ ಶಹಾಪೂರ
...ಥ ಶಾಂತವೀರಪ್ಪ ಪತ್ತಾರ




**PRINTED MATTER**
**Book–Post**

ಗೆ,

ಶ್ರೀಮತಿ/ಶ್ರೀ [illegible]

[illegible]

ಧಾರವಾಡ [illegible]

ಸಂಪಾದಕ, ಪ್ರಕಾಶಕ, ಮುದ್ರಕ : ತಿಮ್ಮಯ್ಯ ಪುರ್ಲೆ
ಪುರ್ಲೆ ಪ್ರಿಂಟರ್ಸ್, ಶಹಾಪೂರ-೫೮೫೨೨೩, ಕಲಬುರ್ಗಿ ಜಿಲ್ಲೆ.